ಪ್ರಯೋಗಂ ॥

ಹ್ರಸ್ವಕ್ಕೆ ॥

ಕೇಳ ಮಾಧವ ಭವನ್ಮಥಿತವ್ಯಾ
ಲೋಳದಾನವಕುಲಾಂಬುಧಿಲಬ್ಧೋ
ನ್ಮೀಳನಂ [1]ಭುವನಸಂಹೃತಿ[1]ಮೂಲಂ
ಕಾಳಕೂಟಮೆನೆ [2]ಪುಟ್ಟಿ[2]ನಿಶಾಟಂ ॥ ೧೩೨

ದೀರ್ಘಕ್ಕೆ ॥

ವಾರಣೇಂದ್ರಮಣಿಹೇಮವರಸ್ತ್ರೀ
ಸಾರವಸ್ತುಚಯಮುಮಂ ಕ್ರಮದಿಂ ಕೆ ।
ಯ್ಸಾರಲಾಟಿಸು[3]ವೊಡಿಂ ತಡವಲ್ತೇ[3]
[4]ಕಾರಣಂ[4] ಕುರುಪತೀ [5]ಎಮಗೀಗಳ್[5] ॥ ೧೩೩

## ಸೂತ್ರಂ ३೧

ಸ್ವರಸಂಜ್ಞಿಕಂಗಳಮರ್ದೊಂ
ದಿರೆ ಮುಂದೆ ವಿಕಲ್ಪದಿಂ ದ್ವಿತೀಯೆಗೆ ದೀರ್ಘಂ ।
ದೊರೆಕೊಳ್ಗುಮೆಲ್ಲಿಯಾನುಂ
ಪುರಾತನೋಕ್ತಿಗಳೊ[6]ಳಂತದಲ್ಲಿ[6] ಯಥೇಷ್ಟಂ ॥ ೧೩೪

ಪ್ರಯೋಗಂ ॥

ದಿವಾಕರನ ಪುಟ್ಟಿ ಪೋದ ದಿತಿಜಾಂಡಖಂಡಂಗಳಾ
ನವಂ ಪಿಡಿದು ಪದ್ಮಜಂ ತಗುಳೆ ಪಾಡಿ [7]ಸಾಮಂ[7]ಗಳಂ ।
[8]ಸವರ್ಷಜಲ[8]ಜಾತಿಗಂಧಮದಕೋಪಸತ್ವಂಗಳಾ
ನವಂ ಪಡೆದನಿಂದ್ರಜಾಲಿಗನವೋಲೆ ಕಣ್ಗೊಪ್ಪಿದಂ ॥ ೧೩೫

## ಸೂತ್ರಂ ३೨

ತುದಿಯೊಳ್ ದೀರ್ಘಾದೇಶಂ
ಪೊದಟ್ದು ಷಷ್ಠೀವಿಭಕ್ತಿಗರೆಬರ ಮತದಿಂ ।
ಪುದಿದಿರ್ಕುಂ ಕೆಲಬರ್ ಖೇ
ದದೊಳಂ ಸಂಭ್ರಮದೊಳಂ ಪ್ರಯೋಗಿಸುವರದಂ ॥ ೧೩೬

ಪ್ರಯೋಗಂ ॥

ಷಷ್ಠಿಯ ದೀರ್ಘಕ್ಕೆ—

ಮೃಡನಾ ಗಂಗಾಂಬುಧಾರಾಜಟಿಲತಜಟನಾ ಪಾದ[9]ಪದ್ಮಕ್ಕೆ[9] ಮುನ್ನಂ
ಪೊಡೆವಟ್ಟಿಂದ್ರಂ ಬಟಿಕ್ಕೀಕೆಗೆ ಪೊಡೆವಡೆ ತನ್ಮೌಲಿರತ್ನಪ್ರತಾನಂ ।

---

1 ಯುವನಸಂಹತಿ (ಅ). 2 ಪುಟ್ಟೆ (ವು), ಪುಟ್ಟಿತುಶಾಪಂ (ಅ). 3 ವುದಿಂತಡ ವಾಲ್ತೆ (ಅ). 4 ವಾರಣಂ (ಓ). 5 ನಮಗೀಗಳ್ (ಅ.ಇ). 6 ಳಯುವುದಲ್ಲ (ಅ). 7 ನಾಮಂ (ಓ.ವು). 8 ಸುವರ್ಷಬಲ (ಓ.ವು). 9 ಯುಗ್ಮ (ಓ.ವು).

[1]ಪೊಡದುರ್[1]ದ್ವದ್ಧ್ವೀತಿ ತಟ್ಟುತ್ತಿಡಿದಳಿಗರ್[2]ಳವಿನ್ನೂಡಿದಂತಪ್ಪುವೀಗಳ್[2]
ಮುಡಿದತ್ತಿಂದ್ರಂಗಮುಗ್ರಾಸುರಬಲಮಥನೋದ್ಯೋಗಯೋಗಪ್ರಯೋಗಂ ||

ಖೇದಸಂಭ್ರಮಂಗಳ್ಗೆ ||

ಪೊಂಬೆಸದಿಂದಮೆಯ್ದ್ವ ಸವೆದಂತೆಸೆದೊಪ್ಪುವ ಬಣ್ಣಮುಂ ಕರಂ
ಪಂಬಲಿಸಲ್ಕೆ [3]ತಕ್ಕವಚಱಾಗಿ[3]ಸದೋಗರಗಂಪುಮಾವ ಪೂ |
ವಿಂ ಬಗೆವಾಗಳಿಂತಿವಱೊಳಗ್ಗಳಮಾದೊಡಮಕ್ಕಟಾ ಮರು
ಳ್ದುಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ || ೧೩೮

ಪುಗಿಲಂ ಕ್ರೀಡನಶೀಲನಕ್ಕರಿಗನಾದಂ ಪಲ್ಲವಗ್ರಾಹಿ ವಾ
ಸುಗಿ ನಮ್ಮಾದುದನಾಗಲುಂ [4]ನವೆ[4]ಯಲುಂ ಮೆಯ್ದ್ವರ್ಕುರ್ಮೋ ತಾರನೆಂ |
ಬೆ ಗಡಾ [5]ವೇಳೆ[5]ಯೆನೆಂಬ ಡೊಂಬನಱಿಯೆಂ [6]ಕುತ್ತಂ[6] ನೆಲಕ್ಕಿ[7]ಕ್ಕಿದಂ[7]
ದಗಲೆಂ [8]ರಾಜಿಗ[8] ನಿನ್ನನೆನ್ನೊಡಲೊಳೆನ್ನೀಪ್ರಾಣಮುಳ್ಳನ್ನೆಗಂ || ೧೩೯

## ಸೂತ್ರಂ ೩೩

ಮೊದಲ ವಿಭಕ್ತಿಯೆ ವಾಕ್ಯದ
ಮೊದಲೊಳ್ ಪುದಿದಿರೆಯುಮುರುವಿಶೇಷಣಗತಿಯಿಂ |
ಪದಸಂತಾನಂ ತಾನದು
ತುದಿಯ ವಿಭಕ್ತಿಯೊಳೆ ಕಾರಕಾನ್ವಿತಮಕ್ಕುಂ || ೧೪೦

ಪ್ರಯೋಗಂ ||

ಸಂಗತಸ[9]ತ್ವಂ ಕು[9]ರುರಾ
ಜಂಗಂ ಕರ್ಣಂಗವೇಱಿಸಲ್ಕರಿದನಿದಂ |
ತಾಂ ಗಡವೇಱಿಪನೀ ಪಾ
ರ್ವಂಗಕ್ಕಟ ಮೆಯ್ಯೊಳೊಂದು ಮರುಳುಂಟಕ್ಕುಂ || ೧೪೧

ನರಪರೊಳಗೊಂದು ಕೋಟಿಯು
ಮರೆ ಚಾಪ[10]ಬಲಕ್ಕಧೀಶನಂ[10] ದುಂದುಭಿಯುಂ |
ಬರಿಸಿ [11]ಮದವ[11]ರಜನೆಂದಂ
ತಿರೆ ನೆಗಟೆಂದಾಹವಕ್ಕೆ ಪೇೞ್ದಂ ಬೆಸನಂ || ೧೪೨

## ಸೂತ್ರಂ ೩೪

ಕಾರಕಮುಂ ಕ್ರಿಯೆಯುಂ ಕ್ರಿಯೆ
ಕಾರಕದಿಂದನ್ವಿತಾರ್ಥಮಾಗಿರ್ಪಿನಮು |

---

1 ತೊಡದರ್ದು (ಓ.ಮು). 2 ಳಿವಂ ಸೂಡಿಡಂತಕ್ಕುಮಾಗಳ್ (ಅ). 3 ತಕ್ಕವಚ ಮಾಗಿ (ಓ.ಮು). 4 ನವೆ (ಅ). 5 ವೇಳೆಯ (ಅ). (6) ಮುತ್ತಂ (ಅ). 7 ಕ್ಕಲೆಂ (ಅ). 8 ದಾಜಿಗ (ಓ.ಮು). 9 ತ್ವರ್ಕುರ್ (ಓ.ಮು). 10 ಬಲಕ್ಕಮಧಿಕನಂ (ಅ.ಮು). 11 ದುದ. (ಓ.ಮು).

ಧ್ಯಾರೋಪಮೆಯ್ದುಗುಂ ತ
ತ್ಕಾರಕಗತಿಯೊಳ್ ವಿಭಕ್ತಿ ಪರಿಣತಮಕ್ಕುಂ ॥ ೧೪೩

ಪ್ರಯೋಗಂ ॥

ಅಮೃತದ ಕಂಡಸಕ್ಕರೆಯ ಕೂಟಮು[1]ವೋಲ್ವಳ್[1] ಕೂಟಮುಂ ಸಮಾ
ನಮೆ ವಲವೊಲ್ಲದಳ್ಗೆ ವಿಟ[2]ನೇಟ[2]ವಿಟಂ [3]ಬರೆ ಕೂಟ[3]ಮಿಂಪನೀ ।
ಗುಮೆ ಬೆಲೆಗೊಂಡೆನಾ ಬೆಲೆಗೆ ಮೆಯ್ವೆಲೆ ಮೆಯ್ನಿನ [4]ತಿತ್ತಿ[4]ನೆಂಬ ಕೂ
ಟಮನದನೊಂದು ಕೂಟಮೆನಲಕ್ಕುಮೆ ನಂಜಿನ ಕಾಳಕೂಟಮಂ ॥ ೧೪೪

ಪಿಡಿಯ ಮೇಲಲ್ ಪಿಡಿ ಸೃಕ್ವದೊ
ಳಡಸಿದ ಪಲ್ಲವಕೆ ಪಲ್ಲಮೞಿ ನಿಳ್ಕುವುದುಂ ॥
ಕಡೆಗಣ್ಣೊಳ್ ಕಂಡೊಂದಿಭ
ಮುಡಿದಿತ್ತುದು ಸಾದ್ರ್ರಸಲ್ಲಕೀಪಲ್ಲವಮಂ ॥ ೧೪೫

ವಿಭಕ್ತಿಪರಿಣಾಮಕ್ಕೆ ॥

ಅಸುಹೃತ್ಸೇನೆಗೆ ಸಾಲ್ವನೊರ್ವನೆ ಗಡಂ ರುದ್ರಾವತಾರಂ ಗಡಂ
ನೊಸಲೊಳ್ ಕಣ್ ಗಡಮೆಂದು [5]ನಂಬಿ[5] ಪೊರೆದೆಂ ತಾನಕ್ಕೆ ತಮ್ಮಮ್ಮನ ।
ಕ್ಕಸಲಂಬಂ ತಿರುವಾಯ್ಗೆ [6]ತಂದೞುವರೇ[6] ತಮ್ಮಿರ್ವರುಂ ಕೆಯ್ದುವಂ
ಬಿಸುಟರ್ ಜೋಳದ ಪಾಟಿಯಂ ಬಗೆದರಿಲ್ಲಾ[7]ದ್ರೌಣಿಯುಂ ದ್ರೋಣನುಂ[7] ॥

## ಸೂತ್ರಂ ೩೫

ಜಾತಿಯೊಳಂ ಸಂಖ್ಯಾ[8]ನಾ[8]
ಖ್ಯಾತಿಯೊಳಂ ಕೂಡಿ ನೆಗಟ್ಟುಮೇಕಬಹುತ್ವೋ ।
ದ್ಯೋತನಪರಮೇಕತ್ವಂ
ಮಾತೇಂ ಭಾವದೊಳಮೇಕವಚನಮೆ ಅಕ್ಕುಂ ॥ ೧೪೬

ಪ್ರಯೋಗಂ ॥

ಜಾತಿಗೆ ॥

ಕರಿ[9]ಯಿವು[9] ಕರಿಯಲ್ಲಿವು ಗಿರಿ
ಗಿರಿಯಲ್ಲಿವು ಕರಿ [10]ಕರೀಂದ್ರಮಲ್ಲಿವು[10]ಗಿರಿ ಪೋ ।
[11]ಕರಿಗಿರಿಯೆಂ[11] ದಿನಿಸಪ್ಪೊಡ
ಮರಣ್ಯದೊಳಗಱಿಯಲಾಗ ಕರಿಯುಂ ಗಿರಿಯುಂ ॥ ೧೪೭

1 ಪೋಲ್ವಳ (ಓ). 2 ನಾಟ (ಓ.ಮ). 3 ಬಗೆಗೂಟ (ಅ). 4 ಗಿತ್ತ (ಅ). 5 ನಚ್ಚಿ (ಅ). 6 ದಂಡವರಿದಂ (ಓ). 7 ದ್ರೋಣನುಂ ದ್ರೌಣಿಯುಂ (ಓ.ಮ). 8 ನು (ಓ). 9 ಯಿವು (ಓ). 10 ವರ್ಗಂಗಳಲ್ಲವು ಕರಿ (ಓ). 11 ಗಿರಿವರಮೆಂ (ಓ).

ಸಂಖ್ಯೆಗೆ ॥

ದೆಸೆ ಪತ್ತು ಜಲಧಿ ನಾಲ್ಕಾ
ಗಸವೊಂದು ಕುಲಾದ್ರಿಯೇೞು ತಾಮೆನೆ ಮತ್ತೀ ॥
ವಸುಧಾಮಧ್ಯದೊಳೆತ್ತಲ್
ಮಿಸುಕುವನಿನ್ನೆತ್ತಲುಳಿವನಹಿತಕ್ಷಿತಿಪಂ ॥ ೧೪೯

ಭಾವಕ್ಕೆ ॥

ನಡುವಣ ಕರ್ಪೂರಂ ಕಡೆಯಣ
ಕಡುವೆಳ್ಪಂ ತುದಿಯ ಕೂರ್ಪುವೆಸೆದಿರೆ ವಿೞರಂ ।
ಬಿಡ[1] ದಿಸಲೆ[1] ತೆಗೆದ ಮದನನ
ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ ॥ ೧೫೦

ಸಂಖ್ಯಾಜಾತಿವ್ಯತ್ಯಯಕ್ಕೆ ॥

ಸಂತಮಿರ್ಪುದೆ ನವಗ್ರಹಮಾಶಾ
ದಂತಿಗಳ್ ಪದುಳವೇ ದಿವದೊಳ್ ನಿ ।
ಶ್ಚಿಂತಮಿರ್ಪರೆ ಸುರರ್ ದಿತಿಪುತ್ರಾ
ಕ್ರಾಂತಿ[2]ಯಿಲ್ಲ[2] ವಲಮೆಂಬುದುಮಾಗಳ್ ॥ ೧೫೧

## ಸೂತ್ರಂ ೩೬

ನೀನಾಂ ತಾನೆನಿಕುಂ ಪ್ರಥ
ಮಾನಿರ್ದೇಶಕ್ಕೆ ನಿನಗೆಯೆನಗೆ ತನಗೆಯೆಂ ।
ಬೀ ನುಡಿ ಚತುರ್ಥಿಯೊಳ್ ಸಲೆ
ತಾನಕ್ಕುಂ ಯುಷ್ಮದಸ್ಮದನ್ಯೋಕ್ತಿಗಳೊಳ್ ॥ ೧೫೨

ಉದಾಹರಣೆ ॥

ಆನುಂ ದುಶ್ಶಾಸನನುಂ
ನೀನುಂ ಮೂವರೆ ದಲಾತನುಂ ಕಟಿದ ಬೞಿ ।
ಕ್ಕಾನುಂ ನೀನೆ ದಲೀಗಳ್
ನೀನುಮಗಲ್ದೆತ್ತವೋದಯಂಗಾಧಿಪತೀ ॥ ೧೫೩

ತಾನೆ [3]ಗಡಳಿಪಂ[3] ಮೂರ್ಖಂ
ತಾನೆ ಗಡಂ ತೊಡರ್ದು ಮುಡಿಗೆಗಂ [4]ಬೋವ[4]ಕ್ಕಂ ।
ತಾನೆ ಗಡ ಬರ್ಪನೆನಿಸುವೊ
ಡಾ ನರನಯ್ದಾೞು ದೇವಸಮಂ ಬಟ್ಟಪನೇ ॥ ೧೫೪

---

1 ದೆಸಲೆ (ಓ.ಮು). 2 ಯಲ್ಲ (ಓ). 3 ಗಳಿದಪಂ (ಓ.ಮು). 4 ಜೋವ, ಚೌವ (ಅ.ಓ).

ವೃ॥ ಎನಗೆ ಕೂರ್ಪುದನಾ ಘಟಸಂಭವಂ
ನಿನಗೆ ಕೂರನಟಲ್ ನಿನತಲ್ತು ಕೇ ।
ಳೆನತು ತಂದೆಯ ಶೋಕಮ[1]ನಿರ್ವೆಮುಂ[1]
ಮುನಿವರಂ ತವೆ [2]ಕೊಂದೊಡನೀಗುವಂ[2] ॥ ೧೫೫

ತನಗೆ [3]ಮೇಗಿನಿ[3]ಸಂಬನಿತಾದೊಡಾ
ವನುಮನಾವನುಮೊಲ್ಲುಮೆ ಮೆಚ್ಚಲಂ ।
ತಿನಿತು ಮೆಚ್ಚದರೆಲ್ಲಮನೆನ್ನುಮೆಂ
ದನಿತಱಿಂ ಪೆಟಿ ಸಾರ್ಗುಮೆ ಗಂಡರಂ ॥ ೧೫೬

## ಸೂತ್ರಂ ೩೭

ಅವನಾತನೆಂಬ ಮಾತುಗ
ಳವು ಪುಲ್ಲಿಂಗಪ್ರಯೋಗದೊಳ್ ಸ್ತ್ರೈಣದೊಳಿ ।
ನ್ನವಳಾಕೆಯೆಂಬ ನುಡಿ ಸಂ
ಭವಿಕುಂ ಶೇಷದೊಳದೆಂಬ ಮಾತೆಸೆದಿರ್ಕುಂ ॥ ೧೫೭

ಪ್ರಯೋಗಂ ॥

ಅವನಾಕೆಯನಂತಾತನ
ನವಳುಮಗಲ್ದೊಂದು ಪೊೞ್ತುಮಿರಲಾಱರ್ ಕೂ ।
ರ್ಪವರನಿತುವರೆಗಮಾರೆನೆ
ಭವಾಂತರಸ್ನೇಹಮವರೊಳಾದುದಳುಂಬಂ ॥ ೧೫೮

ಅದು ಸುಖದೊಂದು ಪಿಂಡಮದು ಪುಣ್ಯದ ಪುಂಜಮದಂಗಜಂಗೆ ಬಾ
ಡ್ಮೊದಲದು ಚಿತ್ತಜಂಗೆ ಕುಲದೈವಮದಂಗಜಚಕ್ರವರ್ತಿಗೆ ।
ತ್ತಿದ ಪೊಸವಟ್ಟಮಂತದು ಮನೋಜನ ಕೆಯ್ಪಿಡಿಯೆಂದೆ [4]ಮಾಣ್ಬ[4]ನಾ
ಸುದತಿಯ ರೂಪನಿಂ ಪೆಱತನೆಂದೊಡೆ ಚಿಃ ಕರಮೆಗ್ಗನಾಗೆನೇ ॥ ೧೫೯

## ಸೂತ್ರಂ ೩೮

ನಿತ್ಯಂ ನಪುಂಸಕತ್ವಮ
ಪತ್ಯಕಲತ್ರಾದಿಶಬ್ದದೊಳ್ ಸ್ತ್ರೀಪುಂಸ ।
ವ್ಯತ್ಯಯಮಕ್ಕುಂ ಕರುಣೋ
ಪತ್ಯಕೆಗಳೊಳಂ [5]ವಧಾ[5]ಭಿಲಾಷಾದಿಯೊಳಂ ॥ ೧೬೦

1 ನಿರ್ವರುಂ (ಓ). 2 ಕೊಂದೊಡೆನೀಗುವೆಂ (ಅ.ಮ). 3 ಮೇಲಿನಿ (ಅ). 4 ಮಾಣ್ದಿ. 5 ತಥಾ (ಓ.ಮ).

ಪ್ರಯೋಗಂ ॥

ತದಪತ್ಯಂ [1]ಚಾಗದ[1] ಪೆಂ
ಪೊದವಿರೆ ನೆಗಟ್ದಳ್ ಜಗಕ್ಕೆ ವಿನಯಗುಣೈಕಾ ।
ಸ್ಪದೆ ಸುಗ್ಗಿಯಬ್ಬೆ ತನಗೊಂ
ದಿದ ಚಾಗವೆಡಂಗಿಯೆಂಬ ಪೆಸರೆಸೆವಿನೆಗಂ ॥ ೧೬೧

ಸರಸತಿಗಂ ಸಿರಿಗಂ ಮ
ಚ್ಚರಿಸುವ ವಿದ್ಯಾವಿಶೇಷವಿಭವೋನ್ನತಿಯಿಂ ।
ಸುರಮಾನವಲಲನೆಯ[2]ರೇ[2]
ದೊರೆಯರುಮಾ ನೃಪಕಳತ್ರಮಂ ಪೋಲ್ತಪರೇ ॥ ೧೬೨

ಆದಿಗ್ರಹಣಕ್ಕೆ ॥

ಒರ್ವಳೆ ಪೆರ್ಮಗಳ್ ಬಗೆವೊಡಿನ್ನೆ ಮಗೀಕೆಯೆ ಗಂಡುಗೂಸು ತಾಂ
ಸರ್ವಕಲಾವಿದಗ್ಧೆ ಪೆಱತೇನೊ ಸರಸ್ವತಿಗತ್ತ ಮತ್ತ ಪ ।
[3]ನ್ನಿರ್ವರಲಗ್ಗಳಂ[3] ಶ್ರುತದೊಳಾದೊಡಮೇನಿನಿಸೂನಮುಂಟು ಗಾಂ
ಧರ್ವಮನೊಂದುಮಂ ನೆಱೆಯೆ ಕಲ್ಲಳೆ ಕಲ್ಪಿಪು[4]ದಂತದಂ[4] ನೃಪಾ ॥ ೧೬೩

ಅಪರಾರ್ಧಕ್ಕೆ ॥

ಕರುಣದಿಂ ಮೃಗಮಂ ನಿಜಾಂಕದೊಳಿಟ್ಟೊಡಾ ಕಱೆಯಾದೊಡೀ
ಧರೆ ಮೃಗಾಧಿಪನೆಂದುದಿಲ್ಲ ಮೃಗಾಂಕನೆಂದುದು ಚಂದ್ರನಂ ।
ಕರುಣಮಿಲ್ಲದ ಸಿಂಗಮಂ ಮೃಗರಾಜನೆಂದುದು ಭೂಪರೊಳ್
ಧರೆಗಧೀಶ್ವರನಕ್ಕುಮೇ ಪರಚಕ್ರಕರ್ಕಶನಲ್ಲದಂ ॥ ೧೬೪

ಎಳನೀರೊತ್ತಿನೊಳೊತ್ತಿ ಬರ್ಪ ಪೊನಲೊಳ್ ಸಾಂದ್ರೇಂದುಕಾಂತೋಪಳೋ
ಚ್ಚಳಿತಾಚ್ಛಾಚ್ಛಜಳಪ್ರವಾಹಭರದೊಳ್ ಮಂದಾನಿಳಾಂದೋಳನಾ ।
ಕುಳಿತಾರಾಮಫಳಾಮೃತೋಪಮರಸಸ್ರೋತಂಗಳೊಳ್ ಸಾಲ್ವಿನಂ
ಬೆಳೆದೋರಂ[5]ತೊಱಗಿರ್ದ[5] ಶಾಲಿವನದಿಂ ಸೇವ್ಯಂ ನಗೋಪತ್ಯಕಂ ॥ ೧೬೫

ಅವಳುಮನೊಲಿಸಿ ಕಂಟಿಸಿ
[6]ಗೋವರ ಗುಗ್ಗುರಿಗೆ[6]ಮಾಡಿಯುಂ ತಣಿಯಯ್[6] ಪೆ ।
ರ್ಮಾವುಲಿಗ[7]ನಯೋ[7] ಪೇಱೇಂ
ಸ್ತ್ರೀವಧೆ ನಿನಗಶ್ವಮೇಧಮೋ ಸಂಬಳಮೋ ॥ ೧೬೬

ಎನಗದಱಭಿಲಾಷೆ ತಾನದೇನುಂ
ಮನದೊಳಗಿಲ್ಲ ವಿವೇಕಶೂನ್ಯನಾದಂ ।
ತನಗನುಚಿತಮಪ್ಪುದೊಂದಕೃತ್ಯ
ಕ್ಕೆನಿತುವರಂ ಬಗೆದಂದನೂಹೆಯಿಂದಂ ॥ ೧೬೭

---

1 ಭಾವದ. 2 ರೀ (ಓ.ಮ). 3 ನ್ನಿರ್ವರೊಳಗ್ಗಳಂ. 4 ದಂತುಮಂ. 5 ತೊಸೆದಿರ್ಪ, ತೆಸೆದಿರ್ಪ (ಓ.ಮ). 6 ಗೋವರು ಗುಗ್ಗುರಿಕೆ (ಓ.ಮ). 7 ನೆಯೋ, ನೆಯಾ(ಓ).

ಗ್ರೀವಾದಿಯೊಳ್ ವಿಕಲ್ಪಕ್ಕೆ ॥—

ಕೈಲಾಸಾದ್ರಿಯನೆತ್ತಿ ನೊಂದ ಭುಜಸಂದೋಹಂಗಳಂ ಕೃಷ್ಣಕೀ
ಲಾಲಂ ಸೋರ್ವಿನಮೆಯ್ದೆ ನೀಳ್ದನಿತುಮಾ ಗ್ರೀವಂಗಳಂ ರಾಗದಿಂ ।
ನೀಲಗ್ರೀವನಳುಂಬಮಪ್ಪ ದಯೆಯಿಂದಂ ನೀವಿ ರಾಗಾಬ್ಧಿಕ
ಲ್ಲೋಲಂ ಪೆರ್ಚೆ ದಶಾನನಂಗೆ ಪಿರಿದೊಂ[1]ದುತ್ಸಾಹಮಂ[1] ಮಾಡಿದಂ ॥ ೧೭೮

ಗ್ರೀವೆ ಮೊಗಮುಂಸಮಳಿಕಂ
ಭ್ರೂ ವಕ್ಷಂ ತೋಳ್ ತೊಳಂಕು ತೊಡೆಯೆಂಬೆಡೆಯೊಳ್ ।
ತೀವಿದುವು ಭೀಮನಿಸೆ ವಿಶಿ
ಖಾವಲಿ ಮಾಱಾಂತಗಾತಿಸೇನೆಯ ಮೆಯ್ಯೊಳ್ ॥ ೧೭೯

## ಸೂತ್ರಂ ೩೯

ಆಕಾರಕ್ಕೆ ಲಘೂಕೃತ
ಮೇಕಾರಂ ಬಹುಳಮಕ್ಕುಮಾದೂದಂತ ।
ಕ್ಕೇಕಾಕ್ಷರಪದಮುಟಿಯೆ ನಿ
ರಾಕುಳದಿಂ ಹ್ರಸ್ವಮಕ್ಕುಮೆಲ್ಲೆಡೆಗಳೊಳಂ ॥ ೧೮೦

ಪ್ರಯೋಗಂ ॥

ಧರೆಯಂ ಕ್ಷಮೆಯಿಂ ಹಿಮವ
ದ್ಗಿರಿಸುತೆಯಂ ಪೆಂಪಿನಿಂ ಸುರಾಪಗೆಯಂ ಬಿ ।
ತ್ತರಿಸುವ ಜಸದೆಸಕದಿನನು
ಕರಿಸುವಳಾ ಕಾಂತೆ ಕಾಂತಿಯಿಂ ಶಶಿಕಳೆಯಂ ॥ ೧೮೧

ಬಹುಳಗ್ರಹಣಕ್ಕೆ—

ಕಮಲಂಬೊಲ್ ಮೊಗಮುತ್ಪಲಂಬೊಲಲರ್ಗಣ್ ಚಕ್ರಾಹ್ವಯಂಬೊಲ್ ಕುಚಂ
ಭ್ರಮರಂಬೊಲ್ ಕಚಮಿಕ್ಷುಚಾಪದಳಿನೀಜ್ಯಾಯಂತೆವೊಲ್ ಬಾಸೆ ಕ ।
ಣ್ಗಮರ್ದಿಂಬಾಗಿರೆ [2]ಲಕ್ಕ[2]ಸೂಟ್ ಪರಸುತುಂ ಶ್ರೀ[3]ಗಾತ್ಮ[3]ವಸ್ತೂತ್ತಮೋ
ಪಮೆಯರ್ ದೈವದಗಣ್ಯಪುಣ್ಯವಧುವರ್ ಸೇಸಿಕ್ಕಿ ಬಂದಾಡಿದರ್ ॥ ೧೮೨

ಅಂತುಮಲ್ಲದೆಯುಂ ॥

ಉದಯಾಸ್ತೋನ್ನತಶೈಲಸೇತುಹಿಮವತ್ಕ್ಷ್ಮಾಕೀಳಪರ್ಯಂತ ಸಂ
ಪದೆಯಂ ವಾರ್ಧಿತರತ್ತರಂಗ ನಿನದತ್ಕಾಂಚೀಕಳಾಪಾಂಚಿತಾ ।
ಸ್ಪದೆಯಂ ಸಾಧಿಸಿ ಕಟ್ಟಿಗಂಗೆ ನೆ[4]ಲನಂ[4] ನಿರ್ವ್ಯಾಜದಿಂದಂ ನಿಮಿ
ರ್ಚಿದ ಗೆಲ್ಲಂ ಭುವನೈಕರಾಮಮಹಿಪಂಗಕ್ಕುಂ ಪೆಱರ್ಗಕ್ಕುಮೇ ॥ ೧೮೩

---

1 ದಾಹ್ಲಾದಮಂ. 2 ಲಕ್ಕೆ (ಓ.ಮು). 3 ಗೋತು. 4 ವಲಂ.

ಅಪರಾರ್ಧಕ್ಕೆ ॥

ಮದನವಿಭ್ರಮಲಕ್ಷ್ಮಿಗೆ ಮೂಲಂ ವಾಗ್ವಧುಗಾಯತಿ ಲೀಲೆಗಾ
ಸ್ಪದಮಳರ್ಕೆಗೆ ತಾಯುರುಸೌಭಾಗ್ಯಕ್ಕೆ ವಿಳಾಸನಿಕೇತನಂ ।
ಮದಗಜಾಲಸಗಾಮಿನಿ ತಾನಾ ಕಾಮಿನಿ ಗೋಮಿನಿಯಿಂ ಮಿಗಿಲ್
ಚದುರ ಪಾಟಿಯ ಸೀಳದ ಪೆಂಪಿಂದಾ ಸತಿಗಾರ್ ದೊರೆ ಧಾತ್ರಿಯೊಳ್ ॥ ೧೭೪

ಏಕಾಕ್ಷರಪದಕ್ಕೆ ॥

ಆಗಳ್ ಜನಂ ಕೆಯ್ದುವನಿಕ್ಕಿ ವೀರ
ಶ್ರೀಗಾಣ್ಮನಯ್ ಪಾಣ್ಬ[1]ತನಕ್ಕೆಳ[1]ಪ್ಪಯ್ ।
ಪೋಗೇಕೆ ನೀಂ ಮೆಯ್ಗರೆದಿರ್ಪಯೆಂದಾ
ಭೋಗೀಶ್ವರಂಗಂದು ವಿನಮ್ರನಾದಂ ॥ ೧೭೫

## ಸೂತ್ರಂ ೪೦

ಧಾತುವಿಹಿತಂ ತೃಶಬ್ದಂ
ಖ್ಯಾತವಿಭಕ್ತ್ಯಂತರಂಗದೊಳ್ ನಿಲ್ಕುಂ ತಾ ।
[2]ನಾ ತೆಱದೆ ನಿಲ್ಲದಂದುಪ[2]
ಜಾತಾರಾದೇಶಮಾಗಿ ನಿಯತಂ ನೆಗಳ್ಗುಂ ॥ ೧೭೬

ಲಕ್ಷ್ಯಂ ॥

ಹೋತೃವೆನಾನಧ್ವರಿಯಯ್
ಭ್ರಾತೃವೆ ನೀನುಱಿದ ಋತ್ವಿಜರ್ ಯಾದವರು ।
ದ್ಧಾತೃ ಶುಚಿಸಚಿವನೆನೆ ಸುರ
ಜೇತೃವೆ ಪಶುವಾಗೆ[3]ಯಾಮೆ[3] [4]ಬೇಳೆವೆ[4]ಮುನ್ನಂ ॥ ೧೭೭

ಆನ್ನೋಡದರ್ಜುನನೆಂಬೆನಂತಕಸುತಂ ಭರ್ತಾರನೆಂಬಾತನ
ಕ್ಕುಂ [5]ನಾನಾನ್ನವಿಪಾಕಿ ವಲ್ಲಲ[5]ನವಂ ಭೀಮಂ ಹಯಾಧ್ಯಕ್ಷತಾ ।
ಸನ್ನದ್ಧಂ ನಕುಲಂ ಗವಾಧಿಕೃತನಾ ಸಾದೇವನಂದಾವಳಿಂ
ದನ್ನರ್ ಕೀಚಕರಳ್ಕಿದರ್ ಮಗಳವೊಳ್ ಸೈರಂಧ್ರಿ ಪಾಂಚಾಲನಾ ॥ ೧೭೮

## ಸೂತ್ರಂ ೪೧

ಬಿದಿಗಭಿಧಾನಂ ತಾನಂ
ತದಾದೊಡಕ್ಕುಂ ವಿಧಾತೃಶಬ್ದಂ ರಾಂತಂ ।

1 ತಳಕ್ಕೆನ. 2 ನೇತಱಿಂದಲ್ಲದೊಡುಪ (ಬಿ). 3 ನಾವೆ (ಬಿ:ಮ).
4 ಬೇಳ್ಪೆವು (ಅ). 5 ನಾನಾಜ್ಯವಲ್ಲವ (ಬಿ), ನಾನಾಭುಜ್ಯವಿಪಾಕಪಲ್ಲಲ (ಮ).

ತ್ರಿದಿವಸ್ಥಿತರೊಳರಾದೇ
ಶದಿಂದವೊಡಗೂಡಿ ವರ್ತಿಕುಂ ಪಿತೃಶಬ್ದಂ ॥ ೧೭೯

ಉದಾಹರಣೆ ॥

ಪೂರ್ವಾರ್ಧಕ್ಕೆ ॥

ಕೆಯ್ವಾರವೇಂ ಪೊಗಟ್ತೆಯೆ
ಮುಯ್ವಾಂಪನಿತಂದವೊಂದೆ ಸುಂದರಿಯೆರಡುಂ ।
ಮುಯ್ವಂ ಪಡೆದಗ್ಗಳಿಕೆಗೆ
ಮೆಯ್ವೆರ್ಚಿ ವಿಧಾತೃ[1]ನಿರದೆ ಮುಯ್ವಂ ನೋೞ್ಪಂ[1] ॥ ೧೮೦

ಅಪರಾರ್ಧಕ್ಕೆ ॥

ಉಡುವವರುಮನುಣ್ಬರುಮಂ
ನಡೆ ನೋಡಿ ಕನಲ್ದೊನಲ್ದು ಮುನ್ನಿನ ಭವದೊಳ್ ।
[2]ಕುಡದರ್[2] ಕಣ್ಬಡಿನೊಳ್ ಧೃತಿ
ಗಿಡೆ ಬಡವರ ಪಿತರರಂತೆ ಮಱುಗುತ್ತಿರ್ಪರ್ ॥ ೧೮೧

## ಸೂತ್ರಂ ೪೨

ತ್ವಯುವಾದ್ವ್ಯಸಖಿಯನ್ವ
ತ್ಯಯಮನ್ಸಂತಂ ಬಹುತ್ವವಿಷಯಕೃತಾದೇ ।
ಶಯುತಂ ವಿಕಲ್ಪದಿಂದಂ
ಪ್ರಯೋಗಿಸಲ್ಪಡೆಗುಮೆಸೆವಿನಂ ಕನ್ನಡದೊಳ್ ॥ ೧೮೨

ಪ್ರಯೋಗಂ ॥

ಶ್ವಾನಂಗಳ್ [3]ಗಂಧ[3]ಮಾರ್ತಂಡನನತಿಹಿತದಿಂ ಕಾಪುಗೊಂಡಿರ್ದುವುಗ್ರ
ಶ್ವಾನಂಗಳ್ ಕಂಡು ದೂರಾಂತರದೊಳಿವರ ಬರ್ಪಂದಮಿಂಬ[4]ಲ್ತದ[4]ಸ್ಮ ।
ದ್ಯೂನಾರೀನಾಥನೊಳ್ ತಳ್ತಿಱುವ ಬವಸೆಯಂ [5]ಪೂಣ್ದು[5] ಬಂದಪ್ಪರೀತಂ
ಗೀ ನಿದ್ರಾಭಂಗಮಂ ಮಾೞ್ಪುದು ಪದನಣಮಲ್ತೆಂದು ನಿಂದಾಂತುವಾಗಳ್ ॥

ಈ ಯುವಾನರನವದ್ಯವಿದ್ಯರಾ
ಮ್ನಾಯಶುದ್ಧರವದಾತಕೀರ್ತಿಗಳ್ ।
ತೋಯಜಾಕ್ಷಿ ನಡೆ ನೋಡ ಮನ್ಮಥ
ಶ್ರೀಯನಾದರಿಸಿ ನಿಂದರಿಂತಿವರ್ ॥ ೧೮೩

ಪ್ರಣುತಗುಣರೆನಿಪ ವಿಬುಧಾ
ಗ್ರಣಿಗಳ್ ಕೆಯ್ಕೊಂಡು ಪೊಗೞೆ ಸಲೆ ನೆಗೞ್ದುವು ಧಾ ।

---

1 ನರಮೆಮುಯ್ವಾಂತಿರ್ಪಂ (ಓ.ಮ). 2 ಕೆಡೆದಂ (ಓ). 3 ಕಂಡು (ಓ.ಅ). 4 ಲ್ಲಮ (ಓ.ಮ). 5 ಮಾಣ್ದು (ಓ), ಸಾರ್ದು (ಮ).

ರಿಣಿಯೊಳಗೆ ನಾಗವರ್ಮನ
ಗುಣವರ್ಮನ ಶಂಖವರ್ಮನಧ್ಯಾನಂಗಳ್ ॥ ೧೮೫

ಸಮವಯಸಂ ಸಮಸತ್ವಂ
ಸಮಾನವಿಭವಂ ಸಮಾನಶೀಲವ್ಯಸನಂ ।
ಸಮವಿದ್ಯಾವಿಭವಯುತಂ
[1]ಸಮಸುಖದುಃಖಂ[1] ಸಹಾಯನಕ್ಕೆ ಸಖಾಯಂ ॥ ೧೮೬

ಈಯಲ್ಬಂದತ್ತು ಕಲ್ಪಾಂಘ್ರಿಪಮಭಿಮತಮಂ ಪೂರ್ವಪುಣ್ಯಾರ್ಜಿತಂ ಕೇ
ಳೀಯಲ್ಬಂದತ್ತದೊಂದಕ್ಷಯನಿಧಿಯೆನುತುಂ ತನ್ನನೊಲ್ದಾತ್ರಿಲೋ[2]ಕ[2] ।
ಶ್ರೀಯೆಲ್ಲಂ ಪೊರ್ದಿದಂತೇನೊಸೆದನೊ ಮನದೊಳ್ ಸೂಕ್ತಿಕರ್ಣಾವತಂಸಂ
ಶ್ರೇಯಾಂಸಂ ಪ್ರೋನ್ನತಾಂಸಂ ಸುಕವಿಜನಮನೋಮಾನಸೋತ್ತಂಸಹಂಸಂ॥

ಅದ್ವೈತವಾದಿನಿವಹಮ
ದದ್ವಿರದಘಟಾವಿಪಾಟನೈಕಪಟಿಷ್ಠಂ ।
ಸ್ಯಾದ್ವಾದಾಚಲಸಿಂಹಂ
ವಿದ್ವಾಂಸರ್ ಪೊಗಳೆ ವಾದಿರಾಜಂ ನೆಗಳ್ದಂ ॥ ೧೮೮

ವಿಕಲ್ಪಗ್ರಹಣಕ್ಕೆ ॥

ಜ್ಯಾಯನರಣ್ಯದೊಳ್ ನೆಲಸು[3]ಗುಂ[3] ಗಡ[4]ಮಯ್ಯ[4] ಕನೀಯನನ್ವಯ
[5]ಶ್ರೀಯೊಳಧಿಷ್ಠಿತಂ[5] ಗಡಮಿನಾನ್ವಯಜಾತರೊಳಿನ್ನವಿನ್ನವ ।
ನ್ಯಾಯಮವಿನ್ನವಿನ್ನವಬಳಾಮುಖರತ್ವಮವಿನ್ನವಿನ್ನವ
ಶ್ರೇಯಮವಿನ್ನವಿನ್ನವಕೃತಕ್ರಮವೃತ್ತಿಯನಾರೊ ಸೈರಿಪರ್ ॥ ೧೮೯

## ಸೂತ್ರಂ ೪೩

ಪಡೆಗುಂ ವಿಭಾಷೆಯಿಂದಂ
ಕಡೆಯೊಳದಂತತೆಯನಸ್ವರಂ ವೃದ್ಧನವೋಲ್ ।
ಪಡೆಗುಮದರ್ಶನಮಂ ಮೇಣ್
ಪಡೆಗುಂ ದ್ವಿಭಾವವೃತ್ತಿಯಂ ಮೇಣ್ [6]ಶ್ರುತಿವೋಲ್[6] ॥

ಪ್ರಯೋಗಂ ॥

ಪರಿಣತವಯಸರೆಮಿಕ್ಕ
ಣ್ಗುರುಡರೆಮೆಮಗಿಂಬುಕೆಯ್ವುದುಚಿತಂ[7]ನಿನ್ನೀ[7] ।

1 ಸಮದುಃಖಸುಖ- (ಮ). 2 ಕೀ (ಅ). 3 ವಂ (ಅ). 4 ಮೆಯ್ಯ, ಮಯ್ಯೆ (ಅ). 5 ಶ್ರೀಯೊಕದಿಳದೀಕ್ಷಿತಂ (ಅ). 6 ಕೃತಿವೋಲ್, ಕೃತಿಯೊಳ್ (ಅ). 7 ನೀನೀ (ಅ).

ಗುರು ನುಡಿದ ನುಡಿಗೊಡಂಬಡು
ಗುರುವಚನಮು[1]ಲಂಘನೀಯ[1]ಮೆಂಬುದು ಮಗನೇ ॥ ೧೯೧

ಮೊದಲೊಳ್ ಚಪಲಂ ಮರ್ಕಟ
ನದು ವೃಶ್ಚಿಕದಷ್ಟನೆಂಬವೊಲ್ [2]ನವವಯದು[2] ।
ನ್ಮದ[3]ಮಂತೆ[3] ಸುತಂ ಪಿತೃಧನ
ಮದಮತ್ತಂ ಮೂರ್ಖನೆಂದೊಡೇನಱಿಸುವುದೋ ॥ ೧೯೨

ವ್ಯವಸ್ಥಿತವಿಭಾಷೆಗೆ ॥

ಇವೆಂಬುನಿಧಿಕೂಪದಿಂದಮರನಂದನಕ್ಕೇತಮೆ
ತ್ತುವಲ್ಲಿ ಗಡೆಯಾಗಲುಂ ಕಡಲ ಗುಣ್ಪನಾರಯ್ಯಲುಂ ।
ದಿವಕ್ಕಡರಲೇಣಿಯುಂ ಸಮೆಯಲುಂ [4]ವಲಂ[4] ಬಾಡ್ತೆಯುಂ
ಬವೊಲ್ ಬೆಳೆದು ನಿಂದ ಪೆರ್ವಿದಿರ ಸುರ್ವಗುರ್ವೆಲ್ಲಿಯುಂ ॥ ೧೯೩

ಲೋಪಕ್ಕೆ ॥

ಸರಿವಟ[5]ಗಱೆ[5]ವಂತಿರೆ ಭೋ
ರ್ಗರೆದೊರ್ಮೊದಲೆಱಗಿ ದೆಸೆಗಳೆಲ್ಲಮನೊಡನಾ ।
ವರಿಸಿ ತರತರದೆ ನಸು ಮಸು
ಳ್ದಿರೆ ಪುದಿದುವು ನಭವನಭವನಂಬುಗಳೆತ್ತಂ ॥ ೧೯೪

ದ್ವಿಭಾವಕ್ಕೆ ॥

ದಿಕ್ಕನಿತುಂ ತೋಱಿದುವು ಜ
ಲಕ್ಕನೆ ಮೂಕಾದಿಗಳ್ಗಮಂದತಿಲಲಿತಂ ।
ವಾಕ್ಕಾದುವು ಕುಸುಮಿಸಿದುವು
[6]ಮಿಕ್ಕಿಸೆವಾಕ್ಷು[6]ಪಕುಜಾತ[7]ವೀರುತ್ತು[7]ಗಳುಂ ॥ ೧೯೫

## ಸೂತ್ರಂ ೪೪

ಅನುಸಂಧಿಸಿ ಕೃತ್ಸ್ನವ್ಯಂ
ಜನಂಗಳಿರೆ ಮುಂದೆ ಬಿಂದು ಪರಿವರ್ತಿಸುಗುಂ ।
ಮನದೊಳ್ ವರ್ಗಂ ಪರಮಾ
ಗಿ ನಿಲೆ ವಿಕಲ್ಪದೆ ತದೀಯಪಂಚಮಮಕ್ಕುಂ ॥ ೧೯೬

ಪ್ರಯೋಗಂ ॥

ಪೂರ್ವಾರ್ಧಕ್ಕೆ ॥

ಕುಲಮುಂ ಚಲಮುಂ ವಿದ್ಯಾ
ಬಲಮುಂ ಶೌರ್ಯಾವಲೇಪಮುಂ ಪೊಗಟೆ ನೆಲಂ ।

---

1 ಲಂಘ್ಯನಿಯುತ (ಓ.ಅ). 2 ನವಯುವಮು, ನವಯುವ್ವನಮು (ಅ.ಮ). 3 ಮಾಂತ್ರ (ಓ). 4 ದೆಲರ (ಓ.ಮ). 5 ಕಱೆ (ಅ). 6 ಮಿಕ್ಕಿನವಾಕ್ಷಪ (ಓ.ಮ). 7 ನೀರೊತ್ತು (ಓ.ಮ).

ನೆಲಕೆಲ್ಲಂ ನೆಗಟ್ದಂ ದ್ವಿ
ಟ್ಕುಲಕುಲನಗದಳನಪಟುಪವಿಪ್ರತಿಮಭುಜಂ ॥ ೧೯೭

ಅಪರಾರ್ಧಕ್ಕೆ ॥
ಪಂನಗತಳ್ಪಙ್ಕಂಸಹ
ರಂ ನಗಧರನಸುರಮರ್ದನಙ್ಕ್ಷಕ್ರಿ ಮುಕು ।
ನ್ದಂ ನಳಿನನಾಭ[1]ನೇಗೊಳ
ಲೆನ್ನಂ[1] ಬಲಗರ್ವದಿಂದಿದಿರ್ಚುವನಾವಂ ॥ ೧೯೮

ಇದು ಶಬ್ದಸ್ಮೃತಿಯೊಳ್ ನಾಮಪ್ರಕರಣಂ ದ್ವಿತೀಯಂ.

---

# ಸಮಾಸ ಪ್ರಕರಣಂ

## ಸೂತ್ರಂ ೪೫

ಸಂಗತಿಯಿಂದಂ ನಾಮಪ
ದಂಗಳವೇಕಾರ್ಥಗತಿಯೊಳಾಗೆ ಸಮಾಸಂ ।
ಸಂಗಳಿಸುಗುಂ ವಿಭಕ್ತಿಗ
ಣಂಗಳ್ಗಂತರದೊಳಲ್ಲಿ ಲೋಪಮದಕ್ಕುಂ ॥ ೧೯೯

ಅದೆಂತೆನೆ ॥
ಕಡುಗಾಡಿ ನಾಡೆಯುಂ [2]ಕ
ಣ್ಗೆಡಱು[2] ಮನಂ ಬೆರ್ಚೆ ಸುತನ ಬರ್ಪಂದುಂ ಚೆ ।
ಲ್ವೊಡರಿಸಿ [3]ಬಲ್ವಿಡಿ[3] ವಿಡಿದುದು
ತೊಡರ್ದಳಿಪಿಂ ನೋಟ್ಪ ನೋಟಕರ್ಕಳ ಮನಮಂ ॥ ೨೦೦

ಕಟಿದ ಮನಃಪ್ರಿಯವಿರಹದಿ
ನಟಲ್ದು ಬಸವಟಿದು ಮೋದೆ [4]ತನ್ನುರ[4]ದೊಳ್ ಬಾ ।
ಸುಟ ತಳ್ಪು ಶೋಕಶಿಖಿಯಂ
ಕಟಲ್ಚಲೆಂದೊಟ್ಟಿದಸುಗೆಢಳಿರಂ ಪೋಲ್ಕುಂ ॥ ೨೦೧*

ಅಂತುಮಲ್ಲದೆಯುಂ ॥
ಬಲಿಯ ಮಾಂತದ ಬೇಟದೊಳ್ ಪೊಲಗೆಟ್ಟು [5]ಬಿಚ್ಚನೆ[5] ಬಿಟ್ಟ ಕ
ಣ್ಮಲರ್ಗಳಂ ಮಲೆ[6]ದಿಟ್ಟ[6]ನೆಯ್ತರೆ ಕಾಯ್ದು ಸುಂಗೊಳೆ ದೈತ್ಯನಂ ।

---

1 ನಿನಗೊಳನೆನ್ನಂ (ಓ.), ನೀಗೋವಳನು (ಮ.), ನೆಲಗೊಳಲೆನ್ನಂ (ಅ). 2 ಕಣ್ಗಿದಱು, ಕಣ್ಗಿಡಡೆ (ಅ). 3 ಬಪ್ಪಿಕೆ, ಬಬಿಡೀ (ಅ). * ಈ ಪದ್ಯಕ್ಕೆ ಹಿಂದೆ–ಅಲ್ಲ ಗಮಕತ್ವಕ್ಕೆ–ಎಂದು ಕೆಲವು ಪ್ರತಿಗಳಲ್ಲಿ ಇದೆ. 4 ತಮ್ಮುರ (ಅ). 5 ಬೆಚ್ಚನೆ (ಅ.ಇ). 6 ದಿಟ್ಟಿ (ಓ.ಮ).

ಪೊಲಸು ನಾರ್ಪಿನೆಗಂ ತ್ರಿಶೂಲದಿನೊತ್ತಿ ಕೊಂದ ಕುಮಾರಿ ಕೂ
ರ್ತಲಸದಿರ್ಕೆ ಭುಜಾಸಿಧಾರೆಯೊಳಂಕಮುಳ್ಳರದೇವನಾ ॥ ೨೦೨

ಆ ಜಂಬೂದ್ವೀಪ ಮಹಾ
ರಾಜಕಿರೀಟಾನುಕಾರಿ ಚಾಮೀಕರವಿ ।
ಭ್ರಾಜಿತಕಟಕ[1]ಮಗೇಂದ್ರ[1]ಸ
ಮಾಜಚಮೂಚಕ್ರವರ್ತಿ ಮಂದರಶೈಲಂ ॥ ೨೦೩*

## ಸೂತ್ರಂ ೪೬

ಉತ್ತರಪದದರ್ಥಂ ಮೆ
ಯ್ವೆತ್ತಿರೆ ತತ್ಪುರುಷಮಂತದೇಕಾಶ್ರಯಮಾ ।
ಗುತ್ತುಮಿರೆ ಕರ್ಮಧಾರಯ
[2]ಮೆತ್ತಂ[2] ದ್ವಿಗುಸಂಜ್ಞಮದುವೆ ಸಂಖ್ಯಾದಿಪದಂ ॥ ೨೦೪

ಪ್ರಯೋಗಂ ॥

ತತ್ಪುರುಷಕ್ಕೆ ॥

ಅರಮನೆಗಲ್ತು ಸೂಳೆಮನೆಗಲ್ತು ಸವರ್ಣನೆಗಲ್ತು ಕೂಡೆ ಬ
ಲ್ಲರ ಬಗೆಗಲ್ತು ವಸ್ತುಕೃತಿಯಂ ಸಲೆ ಪೇೞ್ವುದು ಕಲ್ತು ಪೇೞದಂ ।
ದರಮನೆಗಲ್ತು ಸೂಳೆಮನೆಗಲ್ತು ಸವರ್ಣನೆಗಲ್ತು ಕೂಡೆ ಬ
ಲ್ಲರ ಬಗೆಗಲ್ತದಾವೆಡೆಗಮಲ್ತದು [3]ಕಲ್ಪಿ[3] ವಲಂ ಕವೀಂದ್ರರಾ ॥ ೨೦೫

ಕರ್ಮಧಾರಯಕ್ಕೆ ॥

ಅಲರ್ಗಣ್ ಪೊಂಗಿದ [4]ಲೋಳೆ[4]ವಾಯ್ ನಗೆಮೊಗಂ ತೂಂಗಲ್ಗುರುಳ್ ಕೆಂದಳಂ
ಸುಲಿವಲ್ ಸೋರ್ಮುಡಿ ತೆಳ್ವಸಿಱ್ ಪೆಱೆನೊಸಲ್ ಪೊಂಬಾಳೆ ಪಚ್ಚೋಲೆ ನೇ।
ಱಿಲ ಪಣ್ಣಂ ತಿಳಿಯುಣ್ಣಿಯೊಳ್ ಬಯಸಿ ತೊಯ್ದಂತಪ್ಪ ನುಣ್ಗರ್ಪು ಪೆ
ರ್ಮೊಲೆ ಚೆಲ್ವಾಗಿರೆ ನಿಂದ ಬೇಡಿತಿಯುರಂ ಕಂಡಂ ಮಹೀವಲ್ಲಭಂ ॥ ೨೦೬

ದ್ವಿಗುವಿಂಗೆ ॥

ಇರ್ವಾಳ್ ಮೂವಾಳಿಕ್ಕಿ
ದೊರ್ವರೆಯೊಳ್ [5]ಬೆಳೆಗೆ ಸಾರೆ[5] ಕೊಳೆ ಪದವಡೆಗಳ್ ।
ಕರ್ವಿನ ಮಡಲಂತೆ ಕವ
ಲ್ತುರ್ವಿದ ಕೆಯ್ವೊಲಗಳೆಸೆ[6]ಗುಮೋ[6]ರೊಂದೆಡೆಯೊಳ್ ॥ ೨೦೭

## ಸೂತ್ರಂ ೪೭

ದ್ವಿಪದಂ ಮೇಣ್ ಬಹುಪದಮ
ನ್ಯಪದಾರ್ಥದೊಳೊಂದಿ ನಿಲೆ ಬಹುವ್ರೀಹಿ ಸಮ ।

---

* ಈ ಪದ್ಯವು ಕೆಲವು ಪ್ರತಿಗಳಲ್ಲಿ ಇಲ್ಲ. 1 ಮೃಗೇಂದ್ರ (ಓ.ಮ). 2 ಮತ್ತಾ (ಓ.ಮ). 3 ಕಬ್ಬ. 4 ಲಾಳೆ (ಅ.ಇ). 5 ಬೆದಗೆಸಾಲ (ಅ). 6 ದುಮೋ. (ಅ).

[1]ಸ್ತ ಪದಾರ್ಥಂ[1] ದ್ವಂದ್ವಂ ಪೂ
ರ್ವಪದಪ್ರಾಧಾನ್ಯಮವ್ಯಯೀ[2]ಭಾವಾಖ್ಯಂ[2] ॥ ೨೦೮

ಪ್ರಯೋಗಂ ॥

ಬಹುವ್ರೀಹಿಗೆ ॥

ಕುಡುವಿಲ್ಲನೆಚ್ಚ ಸರಲುಂ
ನಡದು ದಲಂದೊರ್ವನೆರ್ದೆಯನೊಳ್ಗಬ್ಬಮುವೊ ।
ಳ್ನುಡಿಯುಂ ಗೇಯುಮುಮುರ್ಚದ
ಕಡುಗಲ್ಲೆರ್ದೆಯೆರ್ದೆಯನಂಬು ಪೋಣುರ್ಚುಗುಮೋ ॥ ೨೦೯

ಪಟ್ಟುಕಮೂಗಿನ [3]ಮರವುಲಿ
ಪೊಟ್ಟೆಯ[3] ಕುಸಿಗೊರಲ [4]ಕೆಂಚುದಲೆ[4]ನವಿರ [5]ಕರಂ[5] ।
ಕೆಟ್ಟೊಡೆದ [6]ಸರ[6]ದವಂ [7]ಕಡೆ
ಪಟ್ಟು[7] ಮನಂಗೆಟ್ಟು ನಾಡುನಾಡಂ ತಿರಿಗುಂ ॥ ೨೧೦

ದ್ವಂದ್ವಕ್ಕೆ ॥

ಕಱಿಮಱಿಗಳೊಳವು ನೋಡ್ಪೊಡೆ
ಪೆಱಪೆಱರ ಕುಲಕ್ಕೆ ಕೊಂಡಕೊಟ್ಟೆಡೆಗಳೊಳಂ ।
ಕಱಿಯಿಲ್ಲ ತೈಲನಲ್ಲದೆ
ಪೆಱನಾವ್ರಂ [8]ಪಿಕ್ಕಿ[8] ನೋಡ್ಪೊಡಿರ್ತಲೆ[9]ಗೋಜಂ[9] ॥ ೨೧೧

ತೊಱಗೆಲೆ ಱಟ್ಟಹಳ್ಳಿ ನೆಗಪ್ಪಾಜಿರಗೋಳಮೆನಿಪ್ಪಗುರ್ವುವೆ
ತ್ತಱಿಕೆಯ ಬೇಡವಟ್ಟುಗಳ [10]ಬೂತುಗ[10]ಬೀರುಗ[11]ಗೋಯೆ[11]ಯರ್ಕಳಂ ।
ನೆಱೆಯರೆನಿಪ್ಪೊಡಂ ಕಿಡಿಸಲಂಕದ ಮುನ್ನಿನ ಚಕ್ರವರ್ತಿಗಳ್
ಪೆಱರಳವಲ್ತುವಂ [12]ಕಿಡಿಸಿತೊಟ್ಟಜೆ[12] ತೈಲಪಚಕ್ರವರ್ತಿಯಾ ॥ ೨೧೨

ಅವ್ಯಯಾಭಾವಕ್ಕೆ ॥

ಸಂತಂ ಕಿಟ್ಕೆಱೆಗಳೊಳೋ
ರಂತಿರೆ ಕೆಯ್ಗಾವವಳ್ತಿರಂ ನೋಟ್ಪವರಂ ।
ಮಿಂತಲೆವಾಯ್ತರೆ ಪೊಱಮು
ಯ್ವಂ ತಾಗಿರೆ ತೆಗೆದು ಮದನನಾರ್ದಿಸುತಿರ್ಪಂ ॥ ೨೧೩

## ಸೂತ್ರಂ ೪೮

ಪತ್ತಿರೆ ಕಾರಕದೊಳ್ ಮುಂ
ದೊತ್ತಿ ಸಮರ್ಥಕ್ರಿಯಾಪದಂ ಪದವಿಧಿ ತಾ ।

---

1 ಪದಪದಾರ್ಥ (ಅ). 2 ಭಾವಾರ್ಥಂ (ಅ). 3 ಮರದುಲದೊಟ್ಟೆಯ (ಅ). 4 ಕೆಂದಲೆಯ (ಅ). 5 ಕರ್ದ್ದಂ (ಅ). ಕಲಂ (ಮ). 6 ಕರೆ. 7 ಬಗೆಗೆಟ್ಟು (ಓ.ಮ). 8 ಬಕ್ಕೆ. 9 ಗೊಲಜಂ (ಓ.ಮ). 10 ಬೂತಗ (ಓ). 11 ಗೋಲೆ (ಓ.ಮ). 12 ಕೊಡಿಸಿದೊಟ್ಟಜೆ (ಓ). ಕೆಡಿಸಿದೊಟ್ಟಜೆ (ಅ.ಮ).

ನೊತ್ತರಿಸುಗುಮದಱೊಳ್ ತ
ಳ್ತಿತ್ತಮದಂತಕ್ಕೆ ಬಿಂದು ಸಂದಿಸಿ ನಿಲ್ಕುಂ ‖ ೨೧೪

ಪ್ರಯೋಗಂ ‖

[1]ಊರೇಱಲ್[1] ಮನೆಮಾಡ
ರ್ಕ್ಕಾರಂಬಂಗೆಯ್ಯೆಲೆಟ್ಟುಗೊಳಲಾಳಾ[2]ಳ[2] |
ರ್ಕ್ಕಾರಾಮಮಿಡರ್ಕ್ಕೆಂದುಂ
ದಾರುಣತಾರೆಗಳನುಟಿಯೆ ಪೆಱವಱೊಳುಚಿತಂ ‖ ೨೧೫

## ಸೂತ್ರಂ ೪೯

ಉತ್ತರಪದಂ ವಿಶೇಷ್ಯದೊ
ಳೊತ್ತರಿಸಿರೆ ಪೂರ್ವಪದದುಪಾಂತ್ಯಸ್ವರದಿಂ |
[3]ದತ್ತಿರ್ದುವರ್ಕೆ[3] ಲೋಪಂ
ಮತ್ತಮಿಕಾರಕ್ಕೆ ಬಹುಳಮಕ್ಕುಮೆಕಾರಂ ‖ ೨೧೬

ಪ್ರಯೋಗಂ ‖

ಪೆರ್ಮರನನಡರ್ದ [4]ವನಲತೆ[4]
ಕಾರ್ಮುಗಿಲಂ ತಳ್ತ ಮಿಂಚು ವಿಂಧ್ಯಾಚಲಮಂ |
ನೆರ್ಮಿದ ನರ್ಮದೆಯೆನಿಸಿದ
ಳೊರ್ವೆಯೆ ವನಚರನನಪ್ಪಿ ವನಚರಿಯೊರ್ವಳ್ ‖ ೨೧೭

ಬಹುಳಗ್ರಹಣಕ್ಕೆ ‖

ಪ[5]ಣ್ಣಾಯ ತಳ್ತ ತುಱುಗಲ[5]
[6]ಬಿಣ್ಗನೆ[6]ಯಿಂ ತೂಗಿ ತೊನೆವ ಕೌಂಗಂ ತನ್ನ |
ತ್ತಣ್ಗೆ ಬರೆ ತೆಗೆವ ತೆಱದಿಂ
ಕಣ್ಗೊಳಿಸಿದುದೆಳಸಿ ನಾಗಲತೆ ದಾಂಗುಡಿಯಿಂ ‖ ೨೧೮

## ಸೂತ್ರಂ ೫೦

ಸ್ವರಮಾದಿಯಪ್ಪವವು ಮುಂ
ತಿರೆ ದೀರ್ಘಂ ಮೊದಲೊಳಗುರುಗಕ್ಕುಂ ತದವಾಂ |
ತರದೊಳ್ ಣ ಟ ಳ ನ ತಂಗಳ್
ದೊರೆಕೊಳೆ ತಳೆಗುಂ ದ್ವಿರುಕ್ತಿಯಂ ಬಹುಳತೆಯಿಂ ‖ ೨೧೯

---

1 ಊರತೞಲ್ (ಒ.ಮ). 2 ಗ (ಅ). 3 ದೆತ್ತಿರ್ದುದಕ್ಕೆ (ಒ.ಮ). 4 ನವ ಲತೆ (ಒ). 5 ಣ್ಣಾಯ್ . . . . ತುಱುಂಗಲ (ಅ.ಇ). 6 ಬಿಣ್ಗೆ.

ಪ್ರಯೋಗಂ ||

ಪೂರ್ವಾರ್ಧಕ್ಕೆ ||

ಕಾರೊಸಡುಂ ಕಬರ್ಾಯುಂ
ಪೇರೊಡಲುಂ ತೊಳಪ ದಾಡೆಯುಂ ಪೆರ್ಬಸಿಱುಂ |
ಕ್ರೂರೇಕ್ಷಣಮುಂ ದನುಜಾ
ಕಾರ[1]ಮನೊಡರಿಸೆ[1] ನಿಶಾಟರರ್ವಿಸಿ ತೋರ್ಪರ್ || ೨೨೦

ಅಗುರುಗ್ರಹಣಕ್ಕೆ ||

ಮೇಲುದಂ ಮಱೆದು ಮೆಯ್ಮಱೆದೊರ್ವಳೊಱಲ್ದುಮುಂ
ಬಾಲೆಯಂ ತಿರಿಪಿ ನೂಂಕಿ ಪವಿತ್ರಮನಿಟ್ಟಪ |
ಚೋಲೆವಚ್ಚದೊಳೊಡಂಬಡೆ ಬಂದು ವಿದಗ್ಧ ಭೂ
ಪಾಲನಂದನನನಂದರುಣಾಧರೆ ನೋಡಿದಳ್ || ೨೨೧

ಣಕಾರಕ್ಕೆ ||

ಪಣ್ಣನೆ ತೊಱಲ್ದು ತೀಡುವ
ತಣ್ಣೆಲರೊಳೆಲರ್ಚಿ ವನಚರವ್ರಜಮುದಱೊಳ್ |
ತಣ್ಣನೆ ತಣಿದಿರೆ [2]ಬನದೊಳ್[2]
ಪಣ್ಣನೆ ತಿನುತಿರ್ಪುವೆಳಸಿ ತರುಚರಕುಳಮುಂ || ೨೨೨*

ಟಕಾರಕ್ಕೆ ||

ನಿಟ್ಟೆಯ್ದಿಯಾಗು [3]ಪತಿಯೊ[3]ಳ್
ತೊಟ್ಟನುವಶೆಯಾಗು ಶೀಲವತಿಯಾಗು ಚಿರಂ |
ನಿಟ್ಟಾಯುವಾಗು ನೀನೆಂ
ದಿಟ್ಟರ್ ಸೇಸೆಯನಗಣ್ಯಪುಣ್ಯಾಂಗನೆಯರ್ || ೨೨೩

ಳಕಾರಕ್ಕೆ ||

ಅಳ್ಳಾಡೆ ನರನ ಕೂರ್ಗಣೆ
ಯಳ್ಳೇಱಿಂಗಳ್ಕಿ ಬಳ್ಕಿ ಕುರುಬಲಮೆಲ್ಲಂ |
ಬೆಳ್ಳೋಟ[4]ವೋಡೆ[4] ನಕ್ಕನಿ
ಸೊಳ್ಳಾಳೆಡೆಗೋದನೊದಱಿ ಚಟ್ಟನೊಳೊವಜಂ || ೨೨೪

---

1 ಮುಮೊಡರಿಸೆ (ಅ).

* ತೀಡುವ ತಣ್ಣೆಲರೊಳಲ
ರ್ಚಾಡುವ ವನಚರವ್ರಜಮುದಱೊಳ್ ತ |
ಣ್ಣಾಡನೆ ದಣಿದಿರೆ ಪೀನಂ
ಪಣ್ಣಾಡನೆ ತಿಂದಿರ್ಪುವೆಳಸಿ . . . . . ||

(ಎಂದು ತಿದ್ದಬೇಕು ಎಂದು ಮ. ಪ್ರತಿಯಲ್ಲಿ ಬರೆದಿದೆ).

2 ಪೀನಂ (ಅ). 3 ಪತಿಗೋ (ಓ.ಮ). 4 ಮಾಡೆ (ಮ).

ನಕಾರಕ್ಕೆ ||

ಇನಿಯಳ [1]ತನಿಸೊಂಕಿನುಣ್ಣಿ[1]
ಸೆನೆ ಮಾಲ್ಯಾಭರಣಲೇಪನಂ ತಂಬುಲಮುಂ |
ಬನಿತುಂ [2]ರಾಗಮನಾಗಿಸೆ
ಮನ[2]ದೊಳ್ ದಿವಿಜೇಂದ್ರವಿಭವದಿಂ ಸುಖಮಿರ್ದಂ|| ೨೨೫

ತಕಾರಕ್ಕೆ ||

ಮಡದೊಳೊಂದುವುದೆತ್ತ ಕಿತ್ತಡಿಗಳ್ಗೆನಿಪ್ಪ ತೊಳಪ್ಪುವಾ
ಮಡದೊಳೊಂದಿಯೆ ನಿಂದ ಕಿತ್ತಡಿಗಳ್ಗೆ ನಿತ್ಯನಿಯಾಮದಿಂ |
ಪೊಡೆವಡಿಂ ಗಡಿಮೆಂದು ನೀಱರನೂಱ [3]ಸಾಱುವ[3] ಮಾಣ್ಕೆಯಿಂ
ಪೊಡೆವ ಡಿಂಡಿಮಮೆಂಬಿನಂ ಕಳನೂಪುರಧ್ವನಿ ಪೊಣ್ಮುಗುಂ || ೨೨೬

ಬಹುಳಗ್ರಹಣಕ್ಕೆ||

ಅಂಚೆಯರಗಿಳಿಯ ಪುರುಳಿಯ
ಕೊಂಚೆಯ ಕೋಗಿಲೆಯ ನವಿಲ ಪಾರಾವತದೊಂ |
ದಿಂಚರದಿಂದಂ ಶಬ್ದಾ
ತ್ಮಂ ಚರಮಚರಂ ಜಗಂ ದಲೆನಿಸಿದುದು ಬನಂ || ೨೨೭

## ಸೂತ್ರಂ ೫೧

ಕಡಿದು ನಿಡಿದೆಂಬಿವೆರಡಱ
ಕಡೆಯೊಳ್ ಟತ್ವಂ ತಕಾರಮಕ್ಕುಂ ಕಿಱಿದೆಂ |
ಬೆಡೆಯೊಳ್ ಸ್ವರಮಿರೆ ತಾಮವು
ಪಡೆಗುಮುಕಾರಾಂತಭಾವಮಂ ವ್ಯಂಜನದೊಳ್ || ೨೨೮

ಪ್ರಯೋಗಂ ||

ಕಟ್ಟಾಯದ ಕಣಿ ಪೆಂಪಿನ
ಕಟ್ಟಳೆ [4]ಚೌವಟದ ಮೇರು[4] ನನ್ನಿಯ ತವರೂರ್ |
ನೆಟ್ಟನೆನಿಸಿದ ಜಸಂ ನೇ
[5]ರ್ವ[5]ಟ್ಟ[6]ರೆ ನಿಟ್ಟಾಯುವಕ್ಕೆ[6] ದುಟ್ಟ[7]ತಳಕ್ಕಂ[7] || ೨೨೯

ಬಾಡೆಯ ಖರ್ಜೂರದ ಕಿ
ತ್ತೀಡೆಯ ಕರ್ಮರದ ಮಾವಿನರನೇಱಿಲ ಕಂ |
ಚೀಡೆಯ ಪಲಸಿನ ಮರದಿಂ
ನೂಱುದುಮೆಸೆದಿರ್ಕುಮದಱ ಬಹಿರುದ್ಯಾನಂ || ೨೩೦

1 ತಳಸೊಂಕಿನ್ನುಣ (ಅ). 2 ತುಗಮನಾಗಿಸಿತಾ ಮನ್ಮನ (ಮ). 3 ನೂಱುವ (ಅ). 4 ಚಳಿತನದ, ಮೇಗು (ಓ.ಮ). 5 ರ್ವಟ್ಟ. (ಓ.ಮ). 6 ರೆನಿಟ್ಟಾಯುತಕ್ಕೆ (ಓ.ಮ), ರೆದಿಟ್ಟಾಯುವಕ್ಕೆ (ಅ). 7 ತುಳಕ್ಕುಂ, ತಳಕ್ಕುಂ (ಅ).

ಉದಂತಕ್ಕೆ॥

[1]ತೊಡೆಯಿಂ[1] ಕಡುಗುದುರೆಗಳಂ
ಮಡದಿಂ [2]ನಡು[2]ಪಟ್ಟ ದಂತಿಯಂ ನಿಡುದೋಳಿಂ।
ಕಡುವಾಳಂ ಕೂರಸಿಯಿಂ
ಕಡಂಗಿ[3]ದಣಿ[3]ಯಂ ಸಮಂತು ಬಸದಾಗಿಸುವಂ॥ ೨೩೧

ಕಿಱುನೆಲೆಯ ಲತಾಲಲಿತೆಗೆ
ತಿಱಿದುಕೊಳಲ್ಕಪ್ಪ ಸಾರ್ಕೆಯೊಳ್ಗೊಂಬುಗಳೊಳ್।
ತುಱುಗಿದ ತಳಿರಿಂ ನನೆಯಿಂ
ಕಿಱುಮಿಡಿಯಿಂದೆಸೆದುದಸದಳಂ ಮಾಕಂದಂ॥ ೨೩೨

## ಸೂತ್ರಂ ೫೨

ಪಚ್ಚನೆಯುಂ ಕೆಚ್ಚನೆಯುಂ
ಬೆಚ್ಚನೆಯುಮೆನಿಪ್ಪ ಶಬ್ದದಂತಕ್ಕಕ್ಕುಂ।
ಬೆಚ್ಚಂತಿರೆ ಮತ್ವಂ ಕೆಲ
ರಿಚ್ಚಯಿಪರ್ ಸ್ವಂತಮುಮ[4]ನೇಕಾರ್ರೇತ್ವ[4]ಮುಮಂ॥ ೨೩೩

ಪ್ರಯೋಗಂ॥

ಮತ್ವಕ್ಕೆ॥

ಪಂದಳಿರ ತೋರಣಂ ತ
ಳ್ತೊಂದಿದ ಕೆಂಗುಡಿಯ ಪುದಿವು ಮುತ್ತಿನ [5]ಕಡೆ[5] ಚೆ।
ಲ್ವಂದೆಸೆವ ಮಂಗಳಾನಕ
ದೊಂದು ರವಂ ಬಗೆಗೆ ವಂದುದಂದರಮನೆಯೊಳ್॥ ೨೩೪

ಎನಿತುಂ ಕಾಯ್ದುಂ ಬೆಂನೀರ್
ಮನೆಸುಡದೆಂಬಂತೆ ನಿನಗವರ್ ನಿಲೆ ಕಾಯ್ದುಂ।
ಮನದೊಳ್ [6]ಪೊಲ್ಲದ[6]ನೆಂತುಂ
ನೆನೆಯರಿದಂ ನಂಬು ಕುರುಕುಲಾಂಬರಭಾನೂ॥ ೨೩೫

ಸ್ವಂತಕ್ಕೆ॥

ಪಸುರ್ವೊನ್ನ ಜಗಲಿ ಪಚ್ಚೆಯ
ಪಸುರ್ವಂದರ್ ಮುತ್ತಿನಕ್ಕಿ ನೀಲದ ಜಾಗಂ।
ಕಿಸುಗಲ್ಲರುಣಸರೋರುಹ
ಮೆಸೆದಿರ್ದುವು ರಾತ್ರಿಮತಿಯ ಬೀಡಿನೊಳೆತ್ತಂ॥ ೨೩೬

---

1 ಉಡೆಯಿಂ (ಓ.ಮು). 2 ನಡೆ (ಅ). 3 ದರಿ (ಮು). 4 ನೇಕಾರತ್ವ (ಅ), ನಿಕಾರ್ರೈತ್ವ (ಅ.ಇ). 5 ಕೊಡೆ. 6 ಪೊಲ್ಲಮ (ಅ).

[1]ವಾಸರ[1]ಪತಿ ಬಿಸುಗದಿರಿಂ
ಪೇಸದೆ ತವೆ ಪೀರ್ಗುಮೆಂಬ ಮಱುಕದೊಳಂಭೋ |
ಜಾಸನನಂಬುಜವನಮಂ
ಬಾಸಣಿಸಿದನೆನಿಪು[2]ವಿಡಿದ[2] ತಾವರೆಯೆಲೆಗಳ್ || ೨೩೭

* ಏತ್ವಕ್ಕೆ ||

ಬೇಸಱಿಸುವಂಗಜಾಗ್ನಿಯ
ಕೇಸುರಿ ಕೊಳೆ ಕಟಿದ ಪತಿಯ ವಿರಹದಿನಾಗಳ್ |
ಕೇಸುಗಳೆ[3]ದಂತೆ[3] ಕಡಗವ
ನಾ ಸತಿ ಕಳೆದಿತ್ತಳಾತ್ಮಕರಪಲ್ಲವದಿಂ || ೨೩೮

## ಸೂತ್ರಂ ೫೩

[4]ಪೊಸತು[4] ಪಟಿದೆಳದು ಪೋಱಿಗೊಳ
ಗು ಸಮ[5]ಮೆನಿಪ್ಪಿ[5]ವಱೊಳತ್ವಮಂತಕ್ಕೆ ನಿಪಾ |
ತಿಸೆ ಪಡೆಗುಮವಱೊಳೊಳಗಿಂ
ಗಸಂಗದಿಂ ಸಮನಿಸಿರ್ಕುಮುಳ್ಳಾದೇಶಂ || ೨೩೯

ಪ್ರಯೋಗಂ ||

ಪೊಸದೇಸೆಯುಂ ಬೆಡಂಗಂ
ರಸಪುಷ್ಟಿಯನರ್ಥಸೃಷ್ಟಿಯುಂ ಬಗೆವರೆ ಭಾ |
ವಿಸುವರೆ [6]ಸಾರಣೆಗೆಯವೊಲ್[6]
ಕಸವನೆ ಪಿಡಿವರ್ ಕೆಲರ್ ಮಹಾಪುರುಷರ್ಕಳ್ || ೨೪೦

ತುಟಿಕಲಡುಗೆಗಳೊಳೇಂ ಪಟಿ
ಗಟಿವೆಯ ಕೂಟ್ ತಿವುಡುಗಳೆದ ತೊವರಿಯ ತೊವೆ ಕಾ |
ಯ್ದಟಿಪಿದ ತುಪ್ಪಂ ಕೋಡುವ
ಕಟಿಲಲ್ಲದೆ ದಿವ್ಯಭೋಜನಂ ಪೆಱತುಂಟೇ || ೨೪೧

ಎಳದಳಿರ ತುಱುಗಲೊಳ್ ನೆಱೆ
ದಳದಳಿಪೆಳಮಾವಿನಳ್ಳೆಗೊಂಬಂ ತಳ್ವೊ |
ಯ್ದಳಸಿದ ವಸಂತದೂತಿಯ
ಮಿಳಿರ್ವುಯ್ಯಲನಾಡುವಬಲೆ ಪಾಡಿದಳೊರ್ವಳ್ || ೨೪೨

---

1 ವಾಸವ (ಓ.ಮ). 2 ಪೆಸೆವ (ಅ). * ಯೋಗಭಾವದಿಂ–(ಯೋಗವಿಭಾಗದಿಂ) ಕೇವಲ ಸ್ವಂತಕ್ಕುದಾಹರಣ್–ಎಂದು,.(ಓ.ಮ.) ಪ್ರತಿಗಳಲ್ಲದೆ. 3 ವಂತೆ (ಓ.ಮ). 4 ಪೊಸದು (ಅ). 5 ಮೆಸಪ್ಪ (ಅ). 6 ಸಾರಣೆಯುಂತಿರೆ (ಓ.ಮ).

ಅಳವಿಗಟಿದುರುನಿತಂಬ
ಸ್ಥಳಭಾರಮನಾಂತ ಕಾಲ್ಗೆ ಪೊಱ[1]ಅಡಿ[1]ಗೆಳೊಳೀ ।
ಲಳಿತತುಳಾಕೋಟಿಗಳಂ
ತಳೆವುದದೇವಿರಿದೊ ಮದಗಜಾಲಸಗತಿಯಾ ॥ ೨೪೩

ಒಳಕೆಯ್ಯೊಳಿರ್ದು ಪಲ್ಲಿರಿ
ದೊಳವಾಲಂಗೊಂಡು ಮೊರೆವ [2]ಭಷಕನ[2] ತೆಱದಿಂ ।
ದೊಳಪೊಕ್ಕು ದುರ್ಗಮಂ [3]ಸಂ
ಚಳ[3]ಚಿತ್ತಂ ನುಡಿಗುಮೆಮಗೆ ಬಲ್ಗಂಡಿಕೆಯುಂ ॥ ೨೪೪

ಸಮ[4]ಸುತಿ[4]ಯೊಳೊಂದಿದೊಳ್ಪಿನ
ರಮಣೀರಮಣೀಯಗೇಯಮಾಸ್ಥಾಯಿಕೆಯೊಳ್ ।
ಸಮಸಂದಮರ್ದಿನ ಸರಿವಱ
ಸಮಂತು ಕಱ[5]ದಪ್ಪುದೆಂ[5]ಬಿನಂ ರಂಜಿಸುಗುಂ ॥ ೨೪೫

ಒಳಗುಳ್ಳೋವಣಮುಮರ್ದಿರೆ
[6]ಚಳನಂ[6] ಪೊಱಗೆಸೆಯೆ ಬೆಳಪನೆಯ್ದುವ ಬೆಳಗಂ ।
ಪೊಳೆವ ಸುಲಿವಲ್ಲೆ ಮಸುಳಿಸೆ
ವಿಳಾಸದಿಂ ದರ್ಭಶಯನತಳಗತನಾದಂ ॥ ೨೪೬

## ಸೂತ್ರಂ ೫೪

ತತ್ಪುರುಷಸಮಾಸದೊಳು
ದ್ಯತ್ಪೂರ್ವಪದಾಂತ್ಯಲೋಪಮಕ್ಕುಂ ಪ್ರಚುರಂ ।
ವ್ಯುತ್ಪಾದಿಸಲ್ಕೆ ಪಡೆಗುಂ
ತತ್ಪರದೊಳ್ ಬಱಯಮುಚಿತವರ್ಣಾಗಮಮುಂ ॥ ೨೪೭

ಪ್ರಯೋಗಂ ॥

ಅರನೇಱುಲ ಪೊಂಬಾಱೆಯ
ಸುರಯಿಯ ಮಾಮರದ ಬಕ್ಕವಲಸಿನ ಪುದುವಿಂ ।
[7]ಪರೆ[7]ದುರ್ಬಿದ ಕಟ್ಟಲೆ ದಿನ
ಕರಾಂಶುಗಳ್ಗಂ ವಿಭೇದಿಸಲ್ಕರಿದದಱೊಳ್ ॥ ೨೪೮

ಪ್ರಚುರಗ್ರಹಣಕ್ಕೆ ॥

ಅರಸುಗುಣಂಗಳನತಿಭೀ
ಕರಕಾಂತಂಗಳನವಂ ವಿಯಚ್ಚರರಾಜಂ ।

---

1 ಮಡಿ (ಅ). 2 ಭಷಕದ (ಓ.ಮ). 3 ಚಂಚಳ (ಓ.ಮ). 4 ಸ್ಮೃತಿ, ಶ್ರುತಿ (ಅ). 5 ದಪ್ಪಿಪೆಂ (ಓ.ಮ). 6 ಚಳಪೊಂ (ಅ). 7 ಪರಿ (ಅ).

ಧರಿಯಿಸಿದಂ ಜಳನಿಧಿ ಜಳ
ಚರಚಯಮುಮಂ ರತ್ನಚಯಮುಮಂ ಧರಿಯಿಪಪ್ಪೊಲ್ ‖ ೨೪೯

ಅಪರಾರ್ಧಕ್ಕೆ ‖

ಮಾಂಗಾಯುಗೊಂಚಲೊಳಗುಳಿ
ದಿಂಗೊರಲಿಂದುಲವ ಗಂಡುಗೋಗಿಲೆ[1]ಗಳರ |
ಲ್ಪೊಂಗಲ[1] ನಿಱುದಳಿರೊಳಗೆ ಜಿ
ನುಂಗುವ ಪೆಣ್ದುಂಬಿಗಳುಮಳುಂಬಂ ಬನದೊಳ್ ‖ ೨೫೦

## ಸೂತ್ರಂ ೫೫

ಪ್ರಾಯಿಕಮುಕ್ಕುಂ ದೀರ್ಘಾ
ಮ್ನಾಯಮದಂತೆಲ್ಲ ಶಬ್ದದೊಳ್ ವೃತ್ತಿಗತಂ |
ಮಾಯೆಂಬುದು ಮಹಿಮಾಭಿ
ಪ್ರಾಯದೊಳೊಂದಿರ್ಕುಮೊಂದಿ [2]ಮಹತೆಂ[2]ಬುದಱೊಳ್ ‖ ೨೫೧

ಬಲ್ಲಂತೆಂತುಂ ಗುಣಮನೊಳ[3]ಕೆಯ್ಯಾರ್ಪ[3]ನಾರ್ಪಂದದಿಂದಿ
ನ್ನೆಲ್ಲಿರ್ದುಂ ಪೊಲ್ಲಮೆಯನುಗುಗೆಂಬುಕ್ತಿಯಂ ನನ್ನಿಮಾಟ್ಪಂ |
ತೆಲ್ಲಾ [4]ರತ್ನಂಗಳು[4]ಮನೊಳಕೊಂಡೊಳ್ಪನಂಭೋಧಿ ಲೋಕ
ಕ್ಕೆಲ್ಲಂ ಬೀಱಲ್ ಪೊಱಗೆ ಕಸಮಂ ನಿಚ್ಚಮಿಾಡಾಡುತಿರ್ಕುಂ ‖ ೨೫೨

ಪ್ರಾಯೋಗ್ರಹಣಕ್ಕೆ ‖

ಎಲ್ಲಂಗಮೆಲ್ಲ ಧನಮುಮ
ನೆಲ್ಲೆಡೆಯೊಳಮೆಲ್ಲ ತೆಱದೊಳಂ ಕುಡುಗೆಮ ಸಿ |
ಲ್ಕಲ್ಲದೆ ಬವರದೊಳೇಂ ಗಳ
ಗೆಲ್ಲಂ[5]ಗುಡದಿರ್ಕೆ[5] ಪೊಣರ್ದೊಡಾರ್ಗಂ ಗಂಡಂ ‖ ೨೫೩

ಉತ್ತರಾರ್ಧಕ್ಕೆ ‖

ಮಾದೇವನುಮಾದೇವಿಗೆ
ಸಾದರದಿಂ ಪೇೞ್ದನೀತನುತ್ತಮಸತ್ವಂ |
ಮಾದಾನಿ [6]ಶೌರ್ಯಧನ[6]ನುದಿ
ತೋದಿತಪುಣ್ಯಂ ಹರಿಪ್ರಿಯಂ ನರನೆಂಬಂ ‖ ೨೫೪

---

1 ಯಮಲದೊಂಗಲ (ಅ). 2 ಮಹದೆಂ, ಮಹಪೆಂ (ಅ). 3 ಕೊಳ್ವಾರ್ಪ (ಅ). 4 ರೋಕಂಗಳು (ಓ.ಮ). 5 ಕಾದದಿರ್ಕೆ (ಮ). 6 ಶೌರ್ಯಪರ (ಅ), ಶೌರಿಧನ (ಮ).

## ಸೂತ್ರಂ ೫೬

ಪರಿಗದಿತಬಹುವ್ರೀಹಿಗೆ
ಚರಮದೊಳಕ್ಕುಂ ಯಥಾ[1]ಪ್ರಯೋಗ[1]ಮಕಾರಂ ।
ಪರಪದಮಿಲ್ಲೆಂ[2]ಬೊಂದಿದು[2]
ದೊರೆಕೊಂಡಿರೆ ಲಿತ್ವಮಂತ್ಯವರ್ಣಕ್ಕಕ್ಕುಂ ॥ ೨೫೫

ಪ್ರಯೋಗಂ ॥

ಬಲ್ವಿಲೆಯಂ ತೋಳ್ಕಿಳ್ವಿನ
ಗಲ್ವಿರದಂ ಬಟ್ಟದೊಡೆಯವಂ ಕೆಂಗಣ್ಣಂ ।
ನೇಲ್ದ ಕಿವಿಯಾತನೆನಿಸುವ
ನೊಲ್ದೊಲಿಸುಗುವೆಸೆವ ಬೀರಸಿರಿಯಂ ಧುರದೊಳ್ ॥ ೨೫೬

ಉತ್ತರಾರ್ಧಕ್ಕೆ ॥

ಸೊಗಯಿಸುಗುಮೆ ಪಲ್ಲಿಲಿವಾ
[3]ಯುಗಿಲಲಿಗಂಧಂ[3] ಸಮಂತು ಕೂರಿಲಿಕುಡುಗೋಲ್ ।
ಮಿಗೆ ನಾಣಿಲಿಯೆನಿಸುವ ವಧು
ನಗೆಗೆಡೆಯಕ್ಕುಂ ಸಮಸ್ತ ಜಗತೀತಳದೊಳ್ ॥ ೨೫೭

## ಸೂತ್ರಂ ೫೭

ಒಂದೆಂಬುದರ್ಕೆ ರೇಫಂ
ಸಂದಿಸುಗುಂ ಕಡೆಯೊಳೆರಡೆನಿಪ್ಪುದಱೊಳ್ ತಾ ।
ನೊಂದಿ ನೆಲಸುಗುಮಿರಾದೇ
ಶಂದಲ್ ಮೇಣ್ ಮೇಣುಕಾರಲೋಪಮದಕ್ಕುಂ ॥ ೨೫೮

ಪ್ರಯೋಗಂ ॥

ಓರೆಂಜಲ್ತೊಪ್ಪರ್ಪಂತಿಗೆ
ವಾರದ ಖಳರೊಡನೆ ಬೆರಸಿ [4]ಮೇಳಂ[4]ಗೊಂಡಂ ।
ದಾರುಂ ಲಘುವಪ್ಪರ್ ಪ್ರ
ಸ್ತಾರದೊಳಮರ್ದೆಂಬ ಶಿಥಿಲಸಂಯೋಗದವೊಲ್ ॥ ೨೫೯

[5]ಇರ್ವರ್ಯ್ಗಂ[5] ಹಿತಮಂ ಜಿನ
ಧರ್ಮಮನಿಂಬಾಗಿ ತಿಳಿದು [6]ನೆಗಟ್ದಂ[6]ಗಕ್ಕುಂ ।

---

1 ಪ್ರಕಾರ (ಅ). 2 ದಿಂತಿವು (ಓ.ಮ). 3 ಪಗಿಲಲವಣ್ಣಂ (ಅ), ಯುಗಿಲಲ ವರ್ಣಂ (ಅ), ಯಗಿಲಲವಣ್ಣಂ (ಮ). 4 ಮೆಳ್ತಂ (ಅ). 5 ಇರ್ವರ್ಯ್ಯಂ (ಓ.ಮ). 6 ನೆಗಟ್ವಂ (ಓ.ಮ).

ಸ್ವರ್ಪೋಕ್ಷಸಿದ್ಧಿ ಬಗೆವಂ
ದಾರ್ಮಂ ಪೆಱತಿಲ್ಲ ದೇಹಿಗೀ ಸಂಸೃತಿಯೊಳ್ ॥ ೨೬೦

ಉಕಾರಲೋಪಕ್ಕೆ ॥

ಗೆಲವಂ ಕೊಂಡಭಿಮಾನಿಯಾದನೊಳಕೊಂಡನ್ಯಾಯನೀಕಾಂತೆಯಂ
ಸಲೆ ಶೌಚವ್ರತಿಯಾದ[1]ನಿತ್ತುಱಿದೆರಪ್ಪಾತಾಡಿ[1] ಬಟ್ಟಂ ಜಗ ।
ದ್ವಲಯಕ್ಕೊರ್ನುಡಿಕಾಱನಾದ[2]ನನಯು[2]ಕ್ಕುಳ್ಳಿಕ್ಕಿ ಸಂಗ್ರಾಮದೊಳ್
ಕಲಿಯಾದಂ ವಿಪರೀತಜಾತಚರಿತಂ ಭೂಪಾಲರೊಳ್ ಕಾಮದಂ ॥ ೨೬೧

## ಸೂತ್ರಂ ೫೮

ಅದಿದೆನ್ನದೆ ಮೂಱೆಂಬೀ
ಪದದಂತಂ ಲೋಪಮೆಯ್ದುಗುಂ ಕಪವರ್ಗಂ ।
ತುದಿಯೊ[3]ಳ್ ತಗುಳ್ದು[3] ಪುದಿದಿರೆ
ತದಾಗಮಂ ಹ್ರಸ್ವಪೂರ್ವಮಕ್ಕುಂ ಬಹುಳಂ ॥ ೨೬೨

ಪ್ರಯೋಗಂ ॥

ನೆಲಸಿರ್ದಪ್ಪುದಧಸ್ಥಳಂ[4]ಬಿಡಿದಧೋ[4]ಲೋಕಂ ಸಮಂತೆಯ್ದೆ ಸು
ತ್ತಲುಮಿರ್ದಪ್ಪುದು ಮಧ್ಯಲೋಕಮೆಸೆದಿರ್ದಾಚೂಲಿಕಾಭಾಗದಾ ।
ದಲೆಯೊಳ್[5] ನಿಂದಪುದೂ[5]ರ್ಧ್ವಲೋಕಮೆನೆ ಮೂಲೋಕಕ್ಕೆ ಪೆಂಪಿಂದಗುಂ
ದಲೆಯಾಗಿರ್ದುದು ದೇವದಂಪತಿರತಶ್ರೀಸುಂದರಂ ಮಂದರಂ ॥ ೨೬೩

ಅಪರಾರ್ಧಕ್ಕೆ ॥

ಮುಕ್ಕೊಡೆ ಪುಷ್ಪವೃಷ್ಟಿ ಸುರದುಂದುಭಿ ಕೇಸರಿಪೀಠ[6]ಮೊಂದಿದಂ
ತಿಕ್ಕುವ[6] ಚಾಮರಂ ಮಿಱುಪ ಪೂಗಳ ಗೊಂಚಲಶೋಕೆ [7]ಭಾನುವಂ[7] ।
ಮಿಕ್ಕು [8]ತೊಳಪ್ಪ[8] ಭಾವಳಯಮೊಪ್ಪುವ ಪನ್ನೆರಡುಂ [9]ಗುಣಾಳಿ[9] ಲೋ
ಕಕ್ಕೆ ವಿನೂತವೀರಜಿನಪಾಶ್ರಯಮಂ[10]ಬಿಪು[10] ಸರ್ವಮಂಗಳಂ ॥ ೨೬೪

ಅನವರತದಾನದಿಂ ಮಿ
ಕ್ಕನೂನಸೂನೃತದಿನಸಮಶೌರ್ಯೋನ್ನತಿಯಿಂ ।
ವನ[11]ನಿಧಿಪರೀತ[11]ಸಕಲಾ
ವನಿಯೊಳ್ ಮುಪ್ಪುರಿವೊಲಾದುದಾನೃಪನ ಗುಣಂ ॥ ೨೬೫

ಬಹುಳಕ್ಕೆ ॥

ತೀವಿರ್ದತ್ತು ಮೊದಲ್ ಮೊದಲ್ಗೆ ಪಣೆಯುಂ ಮೂಗಯ್ಯುಮೂಗಯ್ಯನಿ
ತ್ತಾವಕ್ಕೆಯ್ದೆ ಕವಲ್ಕವಲ್ತು ಪಲವುಂ ಕೊಂಬಾದುವೂಳ್ಗೊಂಬುಮಂ ।

---

1 ನಿಶ್ತ್ರುಱಿದೆರಪ್ಪಾತಾಗೆ (ಅ), ನಿರ್ತಱಿದೆ . . . (ಅ.ಇ). 2 ನಯುಶ (ಅ.ಮ). 3 ಳೆಪೊದಟ್ಟು (ಅ). 4 ಬಿಡದಧೋ (ಅ). 5 ನಿಂದುದದೂ (ಅ). 6 ಮೊಂದೆ ತಂದಿಕ್ಕುವ (ಅ). 7 ಭಾಷಣಂ (ಒ.ಮ). 8 ಬೆಳಪ್ಪ (ಒ.ಮ). 9 ಗಣಾಳಿ (ಅ). 10 ದಿಪು (ಒ.ಮ). 11 ವೀಧಿಪತಿತ (ಮ).

ತೀವಿರ್ದತ್ತು ತಳಿರ್ ಮೊದಲ್ ಪಣ್ ಕವಲ್ಕೊಂಬೆಂಬುವೀ ಕೆಂದಳಿರ್
ಮಾವಿಂಗಲ್ಲದೆ ಮಾವುಗಳ್ಗೆ ಪೆಱವ[1]ರ್ಕಿಂತೇಂ[1] ಬೆಡಂಗಕ್ಕುಮೋ ॥ ೨೬೬

## ಸೂತ್ರಂ ೫೯

ಉಪಹತಿ ನಾಲ್ಕುಯ್ದೆಂಬಿವ
ಱುಪಧೆ[2]ಯೊಳಾ[2]ಱೆಂಬಿದರ್ಕೆ ಮೊದಲೊಳ್ ಹ್ರಸ್ವಂ ।
ಸ್ವಪರಸ್ವರಲೋಪಂ ವ
ರ್ತಿಪುದೇೞುಱೊಳಂತ್ಯಲೋಪಮೆಂಟರ್ಕಕ್ಕುಂ ॥ ೨೬೭

ಪ್ರಯೋಗಂ ॥

ಉರಗಂ ಕೊಂಡಲ್ಲಿಂ ನಾ
ಲ್ವೆರ[3]ಲನಿತಂ[3] ಕಳೆದು ಕಟ್ಟಿ ಮೇಗಂ ಬೇಗಂ ।
ಸೆರೆವಿಡುಗೆ ಸುಡುಗೆ ಕಡಿದಿರ
ದರಿದಿಕ್ಕುಗೆ [4]ನೀವಿ ಕಳೆಗೆ[4] ನಿರ್ವಿಷಮಕ್ಕುಂ ॥ ೨೬೮

ಕೀೞು ಪುಗಲೆನೆಯುವೆಂತುಂ
ಮಾೞು[5]ದನಂ[5] ಪೊಕ್ಕು ಶಾಲೆಯಂ ಶಾರ್ಙ್ಗಮ[6]ನಂ।
ದೇೞುಸಿದಪನಹಿಶಯ್ಯೆಯು[6]
ನೇೞುದನಯ್ವಾಯ ಶಂಖಮಂ ಪೂರಿಸಿದಂ ॥ ೨೬೯

ಅಱುದಿಂಗಳಾಯುವುಂಟೆನೆ
ಮಱುಗುವುದುಂ ನಲ್ಲರಲ್ಲಿ ತಮ್ಮಿಂ ಮುನ್ನಂ ।
ಪಱುವಟ್ಟು ಬರೆ ಕನಲ್ವುದು
ಮಱುಪದೆ ನಾಲ್ವರ್ಗೆ ನರಕದುಃಖದ ತೆಱನಂ ॥ ೨೭೦

ಪರಿಮರ್ದಿಸುವುದು [7]ದುತ್ತೂ
ರರಸಮನಿಂಬಾಗಿ[7] ಪಿರಿದು ನೆಲದೊಳ್ ಲವಣಂ ।
ಬೆರಸೊರಸಿಕೊಂಡು ಪೂಸುಗೆ
ಕರಗುಗುಮೇಡ್ಪೊರೆಯೆನಿಪ್ಪ ಕುರುವುಂ ಕ್ಷಣದೊಳ್ ॥ ೨೭೧

ಕಣ್ಗೆದಱದೊಡನೆ ನಾಲ್ವ
ತ್ತೆಣ್ಗಾವುದವರೆಗಮುಗಿದೊಡಂಬುಧಿ ಕಡಲ ।
ತ್ತೆಣ್ಗೆ ಹರಿ ಬಂದು[8]ದಂ ಕಡು[8]
ಜಾಣ್ಗೆಡದಱದಾಗಳವಧಿಬೋಧೋದಯದಿಂ ॥ ೨೭೨

---

1 ಕ್ಕೆಂತೇಂ (ಮ). 2 ಯಿನಾ (ಅ.ಮ). 3 ಲನಿವಂ (ಓ.ಮ). 4 ನಿಗಳಿಗೆ (ಓ.ಮ), ಗಿವಿಯಗಳಿಗೆ (ಅ). 5 ದಿನಂ (ಅ). 6 ನೊರ್ದೇೞುಸಿದನಹಿಪಶಯ್ಯೆಯ (ಮ). 7 ದುತ್ತೂರಸ್ವರಸಮನಿಂಬಾಗೆ (ಅ). 8 ಕಂಡೊಡೆ (ಓ.ಮ).

## ಸೂತ್ರಂ ೬೦

ಒಂಬತ್ತು ದಶಾಹತಿ[1]ಯಿಂ[1]
ತೊಂಬತ್ತನೆ ಸಲ್ಗುಮಗ್ರದೊಳ್ ನೂಱಿರೆ ಮು !
ತ್ತೊಂಬಯ್ಯಾದೇಶಮನವ
ಲಂಬಿಸುಗುಮದಂತೆ ಮುಂತೆ ಸಾಸಿರಮಿರೆಯುಂ ‖ ೨೯೩

ಪ್ರಯೋಗಂ ‖

ಸಾಸಿರಯೋಜನಮುಬ್ಬಿ ಸು
ರಾಸುರಸಂಸೇವ್ಯಮಾಗಿ ತೊಂಬತ್ತೊಂಬ |
ಯ್ಯಾಸಿರಯೋಜನಮಂ ನೆಗೆ
ದೀಸುರಗಿರಿ [2]ಪೆಂಪನೇಂ[2] ಪುದುಂಗೊಳಿಸಿದುದೋ ‖ ೨೭೪

## ಸೂತ್ರಂ ೬೧

ಒಂದೆರಡೆಂಬಿವು ಪರದೊಳ್
ಸಂದಿಸೆ ಪತ್ತರ್ಕೆ ಪನ್ನೆನಿಕ್ಕುಂ ರೂಪಂ |
ಮುಂದೆ ಪೆಱ[3]ವೊಂದಿ[3] ನಿಲೆ ಪದಿ
ಯೆಂದಕ್ಕುಂ ಸ್ವರದೊಳಮುರ್ದು ನಾಗಮುಮಕ್ಕುಂ ‖ ೨೭೫

ಪ್ರಯೋಗಂ ‖

ಎನಗಿದು ಚೋದ್ಯಂ ಪನ್ನೊಂ
ದನೆಯುದು ನೆಲೆ ತನ್ನ ನೆಗಬ್ಬಿದಂತದು ಪದಿನಾ |
ಱನೆಯು ನೆಲೆಗುಯ್ದನೆಂಬುದ
ನೆನೆ ಸುವಿಧಿನರೇಂದ್ರನಚ್ಯುತೇಂದ್ರನುಮಾದಂ ‖ ೨೭೬

ಸಾರಲ್ಸಲ್ಲದು ಪನ್ನೆರಬ್ಬರಿಸಮಂ ನಾ[4]ಡಂತ[4]ಡಂಗಿರ್ಪುದು
ಗ್ರಾರಣ್ಯಂಗಳೊಳೆತ್ತಮೊಂದು ಬರಿಸಂ ಮೆಯ್ದೋಱಲಾಗಾರ್ಗಮಂ |
ದಾರಯ್ಯಾ[5]ರ್ತಡೆಮಾಡಿದಂದು[5] ಮಗುಬ್ದಿತ್ತೀರಾಱುವರ್ಷಂಬರಂ
ಸಾರಲ್ಸಲ್ಲದು ನಾಡನೆಂಬ ಸಮಕಟ್ಟಿಂತಾದೊಡೆಂತಕ್ಕುವೋ ‖ ೨೭೭

## ಸೂತ್ರಂ ೬೨

ಸಾಸಿರಮಿರೆ ಮುಂದೊತ್ತಿ ಸ
ಮಾಸದೊಳಕ್ಕುಂ ಪಯಿನ್ನದರ್ಕೆ ಯಥೋಕ್ತಂ |

---

1 ಯೊಳ್ (ಅ). 2 ಪೆಂಪುವೇಂ (ಓ.ಮು). 3 ಕೊಂದಿ (ಓ.ಮು), ತೊಂದು (ಅ).
4 ಡತ್ತ (ಅ). 5 ತಡೆದಂದು, ತಂದು (ಓ.ಮು).

ಶಾಸಿಸುವರ್ ನೂಱರ್ಕಂ
ಸಾಸಿರಕಂ ಪ್ರಾಂತಲೋಪಮುಂ ಕೆಲವೆಡೆಯೊಳ್ ॥ ೨೭೮

ಪ್ರಯೋಗಂ ॥

ಪಿಡಿಯೆಂ ಚಕ್ರಮನೆಂಬ ಚಕ್ರಿಯ ನಿಲಾಚಕ್ರಂ ಭಯಂಗೊಳ್ವಿನಂ
ಪಿಡಿಯುಷ್ಟಂ [1]ವರ[1]ಚಕ್ರಮಂ ನರರಥಂ ತೂಳ್ದ್ದಾ ಕುರುಕ್ಷೇತ್ರದಿಂ ।
ಪಡುವೆಣ್ಗಾವುದವ್ಪೋಗೆ [2]ಪೋಗಲಿಸುವೆಂ[2] ನಿಚ್ಚಂ ಧರಾಧೀಶರಂ
ಪಡಲಿಟ್ಟಂತಿರೆ [3]ಮಾಡ್ಪ[3] ನೋವದೆ ಪಯಿಂಜಾಸಿರ್ವರಂ ಯುದ್ಧದೊಳ್ ॥ ೨೭೯

ಅಪರಾರ್ಧಕ್ಕೆ ॥

ಒರ್ವಂ ಬಂದೊಂದೆ ತೇರೊಳ್ ನೆರೆದ ಕುರುಬಲವ್ಯೂಹಮಂ ಕೀಱು [4]ಬೆಂಕೊಂ
ಡುರ್ವೀಶಂ[4] ನೋಡೆ ಮಾಱಾಂತೆನಗಮರಿಯನಾಗಿರ್ದನೀ ಮಿಟ್ಟುಗೊಡ್ಡಂ ।
ಸರ್ವರ್ಗಂ ಸಲ್ಲದೆಂದೆಂದೊವಜನೊದಱು ನಿಂದೊರ್ವನುಂ ನೂಱನೂರ್ಚಾ
ಸಿರ್ವರ್ದೊರ್ಗಣರ್ಕಳಾ[5][ಟಂದಿಸೆ][5] ಪೊಗಸಿ ಸರಲ್ ಪಾಯ್ದುವಂದತ್ತಮಿತ್ತಂ॥

ಸಾಸಿರ್ವರ್ ವನಿತೆಯರ
ಯ್ಪಾಸಿರ್ವರ್[6] ಪ್ರಿಯತನೂಜರಱುಕೆಯು ಪದಿನೆ ।
ಣ್ಛಾಸಿರ್ವರರಸುಗಳ್ವೆರ
ಸಾ ಸಾಸಿಗನುಚಿತದೀಕ್ಷೆಯಂ ಕೆಯ್ಕೊಂಡಂ ॥ ೨೮೦

## ಸೂತ್ರಂ ೬೩

ಬೆರಸಿ ಸಮಸಂಸ್ಕೃತಂಗಳ್
ಬರೆ ಕನ್ನಡ[6]ದೊಳಗೆ[6] ಸಮತೆಯಿಂದಂ ಸಲ್ಗುಂ ।
ನಿರವದ್ಯಮಾಗಿ ಪದವಿಧಿ
ವಿರುದ್ಧಮಕ್ಕುಂ ತದನ್ಯಥಾವೃತ್ತಿಗಳೊಳ್ ॥ ೨೮೧

ಪ್ರಯೋಗಂ ॥

ಅರಸುಗುಣಂ ಪಟಿಯುನಣಂ
ಬರಲಿತ್ತುದೆ ಶೌಚದಳವು ಪರವೆಣ್ಗಳಿಪಂ ।
ತರಲಿತ್ತುದೆ ಅಟಜನದೊ
ಳ್ಕಿರ[7]ಸಿರಲಿತ್ತುದೆ[7] ಮಹಾನುಭಾವಂ ನೃಪನಾ ॥ ೨೮೩

ವಿರುದ್ಧಕ್ಕೆ ॥

ತರವೇಟ್ಟಾಣಿಕ್ಯಭಂಡಾರದ ಪುಡಿಕೆಗಳಂ ಪುಂಜಿಸಲ್ವೇಟ್ಟುವಣೋ್ರ್ಣ
ತ್ಕರಮಂ ತೋಟಲ್ಕೆವೇಟ್ದಂತಿಗಳನಿರಿಸವೇಟ್ಕುಂದೆ ವಾಹಂಗಳಂ ಬಿ

---

1 ಕರ (ಓ.ಮ). 2 ಪೋಗಡಿಸುವೆಂ (ಅ). 3 ನೋಡ್ಪ (ಓ.ಮ). 4 ಮಾಱಾಂತುರ್ವೀಶಂ (ಓ.ಮ). 5 ದಂತಿರೆ (ಅ), ದಂತಿಸೆ. 6 ದೊಡನೆ (ಓ.ಮ). 7 ಸಲ್ಕಿತ್ತುದೆ (ಓ.ಮ).

ತ್ತರಿಸಲ್ವೇಟ್ಟಿಚಿತ್ರಚೀನಾಂಬರಪರಿಕರಮಂ ಮಾಣದೆಂದೋಳಿಯಿಂ ಲೆಂ
ಕರನಾಗಳ್ವೇಟ್ಟ[1]ನೀಯಲ್ಕೆರೆದವರ್ಗೆ[1] ಮಹಾದಾನಮಂ ವಿಕ್ರಮಾಂಕಂ॥ ೨೮೪

ವ॥ ಇಲ್ಲಿ ಕೆಲತರ್ಱರಗಾಸಿ ಶಬ್ದಂಗಳೊಳ್ ಸಮತೆಯನಿಚ್ಛೈಸುವರವರ್ಕೆ ಲಕ್ಷ್ಯಂ ॥

ತುರಗದಟಂಗಳ್ಕವಿತರೆ
ತುರಂಗಮಾರೂಢನಾಗಿ ತನ್ನಯ ಹಯಮಂ ।
ಪರಿಯಿಸಿ ಕೊಂಗುಳಿವರ್ಱಂ
ಕರಾಸಿಯಿಂದಿಱಿದು ತವಿಸಿದಂ ಹಯಬಲಮಂ ॥ ೨೮೫

ಕೂರಿಸಿ ವೀರಶ್ರೀಯಂ
ಕೂರದರಂ ಕೊಂದು ಸಮರಜಯಮಂ ಮಾಡ ।
ಲ್ಕೂರಸಿಯೊಳ್ನೆಲಸುಗೆ ಕಂ
ಠೀರವವಾಹನೆ ಚಳುಕ್ಯಕಂಠೀರವನಾ ॥ ೨೮೬

## ಸೂತ್ರಂ ೬೪

ಚಾಪಲವೀಪ್ಸಾಭೀಕ್ಷ್ಣ್ಯ ಸ
ಮೀಪಾನುಕೃತಿ ಕ್ರಿಯಾಸಮಭಿಹಾರಾದಿ ।
[2]ಖ್ಯಾಪ[2]ನೆಯೊಳ್ ಪದಕಕ್ಕುಂ
ರೂಪದ್ವಿತ್ವಂ ಯಥಾಪ್ರಯೋಗಾನುಗತಂ ॥ ೨೮೭

ಪ್ರಯೋಗಂ ॥

ಚಾಪಲಕ್ಕೆ ॥

ಅದಱಿಂದವೊಪ್ಪಿಸೊಪ್ಪಿಸು
ಸುದತಿಯನಣ್ಮಣ್ಮ ಸಾರ್ಱ ಸಾರ್ಱಲೆ ಎಲೆ ನೀ ।
ನದಿರದೆ ನಿಲ್ನಿಲ್ನೀನಿ
ಲ್ಲದಿರ್ಱದಿರ್ಱನೆ ಜಟಾಯು ರಾವಣನೆಂಗುಂ ॥ ೨೮೮

ವೀಪ್ಸೆಗೆ ॥

ಮುದಮೂರೂರಬಲಾಜನಕ್ಕೆ ಪರಿನೀರೂರೂರ ತೋಂಟಕ್ಕೆ ಸಂ
ಪದಮೂರೂರ ಗೃಹಕ್ಕೆ ಪಂಕಜದ ಚೆಲ್ವೂರೂರ ಗುಯ್ಯಲ್ಗೆ ಸಂ
ಮದಮೂರೂರ [3]ಮದಾಳಿ[3]ಗಂಚೆಗಳ ಚೆಲ್ವೂರೂರ ಷಂಡಕ್ಕೆ ಪಾ
ಲೊದವೂರೂರ ದನಕ್ಕತರ್ಕ್ಯಮದಱಿಂ [4]ರಮ್ಯಂ[4] ತದುರ್ವೀತಳಂ ॥ ೨೮೯

ಆಭೀಕ್ಷ್ಣ್ಯಕ್ಕೆ ॥

ಗಿಳಿಯೊಡನೋದಿಯೋದಿ ನುಡಿಗಲ್ತು ಮದಾಲಸರಾಜಹಂಸಮಂ
ಡಳಿಯೊಡನಾಡಿಯಾಡಿ ನಡೆಗಲ್ತು ಕಳಾಪಿಗಳಾಟಮಂ ಮನಂ ।

---

1 ರ್ಯಾರವರ್ಗೆ (ಓ), ಲ್ಕವರವರ್ಗೆ (ಮ). 2 ವ್ಯಾಪನೆ (ಓ.ಮ).
3 ಬುಧಾಳಿ (ಓ.ಮ). 4 ರಯ್ಯಂ (ಅ).

ಗೊಳೆ ನಡೆ ನೋಡಿನೋಡಿ ಕುಣಿಯಲ್ಕೆಱೆ ಕಲ್ತು ಕಲಾಗುಣಂ ಪೊದ
ಳ್ದಳವಡೆ ಬಾಲಭಾವದೊಳೆ ಬಾಲಕಿಯರ್ಬಳೆವ[1]ನಿರಂತರಂ[1] ॥ ೨೯೦

ಸಮೀಪಕ್ಕೆ ॥
ಅಱಿವು ಕೊಲೆ ಕಳವು ಪುಸಿಯುವ
ಗೞಿಯುಂ ಪೞಿಯೆಂಬ ದೋಷದೊಳ್ಪೊರೆದ ನರಂ ।
ಕೆಟಕೆಟಗೆ ನರಕಬಿಲದೊ
ಳ್ಗಟಗಟನಿೞಿಗುಂ ರಸಾಂತಮಂ [2]ತಾಪಿನೆಗಂ[2] ॥ ೨೯೧

ಅನುಕೃತಿಗೆ ॥
ವಿನುತಕ್ರೌಂಚಾಚಳ ರಂ
ಧ್ರನಿಕಟದಿಂ [3]ಪೊಗಸಿ[3] ಬರ್ಪ ಹಂಸಾಳಿಯುನಂ ।
ದನುಕರಿಸಿ ಪರಿದು ಭೋರ್ಭೋ
ರೆನೆ [4]ಪಾಯ್ದುದು[4] [5]ಹಿಮನಗಕ್ಕೆ[5] ಗಂಗಾಸ್ರೋತಂ ॥ ೨೯೨

ವ॥ ತ್ರಿಪ್ರಯೋಗವಱಿಲ್ಲ [6]ಸಾಧುವಕ್ಯಂ[6] ॥
ಬೆಳಗೆಯ್ಗೆಳೊಳಿರ್ದೆತ್ತಂ
ಕಳರವದಿಂ ಕೆಯ್ಯನೆತ್ತಿ [7]ಹಯಲಲ್ಲೆನುತುಂ[7] ।
ಬಳೆಗಳ್ಫಳ್ಫಳ್ಫಳ್ಲೆನೆ
ಗಿಳಿನೋವಾಕೆಗಳಿನೊಪ್ಪುಗುಂ ಕೆಲವೆಡೆಯೊಳ್ ॥ ೨೯೩

ಕ್ರಿಯಾಸಮಭಿಹಾರಕ್ಕೆ ॥
ಅಡವಿ ಬಯಲಾಗೆ [8]ನದವೊ
ಟ್ಕಡುಗೆ[8] ತೆಮರ್ಸರಿಸಮಾಗೆ ಬಟ್ಟೆಯೊಳೆಲ್ಲಂ ।
ನಡೆನಡೆಯೆಂದೇಂ ನಡೆದುದೊ
ಪಡೆ ಪಡೆದಚ್ಚರಿಯನಾಸುರಾಪಗೆವರೆಗಂ ॥ ೨೯೪

ಆದಿಗ್ರಹಣಕ್ಕೆ ॥
[9]ಅಂತಂತೆನೆ[9] ಪರಿಚಾರಕಿ
ಗಿಂತೆಂದಂ ಬ್ರಹ್ಮಚಾರಿ ಕಳೆಕಳೆ ಸಿತಗಂ ।
ಗಿಂತು ಕಿಡಿಸುವುದೆ ತಪಮನ
ದೆಂತು[10]ಗ[10] ಗಿರಿ [11]ಸುತೆಯು[11] ಬಯಸಲಾತಂ ದೊರೆಯೇ ॥ ೨೯೫

## ಸೂತ್ರಂ ೬೫

ಪಲ್ಲಟಿಸಿ ಡಕಾರದ ನೆಲೆ
ಯಲ್ಲಿ ಟಕಾರಂ ಱಕಾರದೊಳ್ ರೇಫಂ ತಾ ।

1 ನಿರಾಕುಳಂ (ಓ.ಮ.). 2 ತಾಗುವಿನಂ (ಓ.ಮ). 3 ಪೊಳಸಿ (ಮ). 4 ಪಾಯ್ವುದು (ಮ). 5 ಹೇಮನಗಕೆ (ಅ). 6 ಸಾರ್ಥಕ (ಅ). 7 ಚಲಲಲೆಯೆ (ಓ.ಮ). 8 ನವೊಳ್ಕುಡಿಯ್ಕೆ (ಅ). 9 ಅಂತಗೆಯೆನೆ (ಓ ಅ). 10 [ಗೆ]. 11 ಸುತೆಯೆ (ಅ).

ನೆಲ್ಲಿಯುಮಕ್ಕುಂ ಪದವಿಧಿ
ಯಲ್ಲಿ ಪರಂ ವ್ಯಂಜನಾದಿಯಾಗಿರೆ ಬಹುಳಂ ‖ ೨೯೬

ಅದೆಂತೆಂದೊಡೆ ‖

ಕಾಡುಂ ಕೋಡುಂ ನಾಡುಂ
ನೀಡುಂ ನಾಮಂಗಳೊಳ್ ಕ್ರಿಯಾರ್ಥಂಗಳೊಳಂ ।
ಮಾಡುವುದುಂ ನೋಡುವುದುಂ
ಬೇಡುವುದುಂ ಟತ್ವವಿಧಿಗೆ ಪರಿಗಣಿತಂಗಳ್ ‖ ೨೯೭

ಅನಿತರ್ಕಂ ಯಥಾಕ್ರಮದಿಂ ಪ್ರಯೋಗಂ ‖

ಕಾಟಿಕ್ಕುಚ್ಚು ತಗುಳೆ ತಮ್ಮೊಳ್
ಕೋಟ್ಟಿಕ್ಕಿ ವನದ್ವಿಪೇಂದ್ರಚಯಮತಿಭಯದಿಂ ।
[1]ನೀಟ್ಕರಿಸಿ[1] ನಿಲ್ಲದೆನಸುಂ
[2]ನಾಟ್ಕಡೆ[2] ಪೋಪಂತೆ ಪೋಪುದೀ ನಗತಟದಿಂ ‖ ೨೯೮

ಕಾಟ್ಪುರಮಾಗೆ ಕಾವ್ಯರಸಮರ್ಥಮುಮಕ್ಕರಮುಂ ಪ್ರತೀತಿಯುಂ
ಮಾಟ್ಟಿನೆಗಂ ಜಲಕ್ಕನಿರೆ [3]ಪೇಟದೆ[3] ಕೆಮ್ಮ [4][ನೊಗಂಟು][4]ವೇಟ್ಟು ಟಿಃ ।
ನೋಟ್ಪುದೆ ಮುಯ್ವನಾಕೃತಿಗೆ ಪಂಚಿಕೆವೇಟ್ಪುದದರ್ಕೆ ಟಿಪ್ಪಣಂ
ಬೇಟ್ಪುದು ಟೀಕುವೇಟ್ಪುದೆನೆ ಪೇಟ್ಪವ[5]ನುಂ ಕವಿಯೆಂಬ ಲೆಕ್ಕವೋ[5] ‖ ೨೯೯

ಮಾರ್ಪಡಿಯೆ ಮಾಣನೀ ಭಟ
ನೇರ್ಪಸ[6]ವಿಗ[6]ನೀತನಿದಿರ್ಗೆ ಬರಲಾರ್ಪವರಾರ್ ।
ಮಾರ್ಪಡೆಯೊ[7]ಳೆನ್ನ ಘನದೋ[7]
ರ್ದರ್ಪಮನಾವರಿಸಿ ನೆಗಟ್ದ ಕಲಿ ರಣವಜ್ರಂ ‖ ೩೦೦

ಬಹುಳಗ್ರಹಣಕ್ಕೆ ‖

ಪೇೞಿರ್ದಿರ್ಪ್ಪರ್ತು ತೋಳುಂ ದಶಮುಖ[8]ಮುಖರಾ[8]ಟೋಪಮುಂ ಮಿಟ್ತು ರೂಪಂ
ತೋೞಿರ್ದಂ[9]ತಿರ್ದ[9] ರೂಪುಂ ಹರನಿದಿರೊಳಗುರ್ವಪ್ಪಿನಂ ಪೊಣ್ಮಿದಣ್ಮಂ ।
ಬೀೞುತ್ತುಂ ದೇವನಂ [10]ಪೂಜಿಸ[10]ಲವಯುವದಿಂದೊಂದೆರಟ್ಮೊೞನಾಲ್ಕ
ಯ್ದಾೞೇಟೆಂಟೊಂಬತೆಂದಿಂತರಿಗುವೆ ತಲೆ[11]ಯೊಂಬತ್ತುಮಂ[11]ದೈತ್ಯರಾಜಂ‖

## ಸೂತ್ರಂ ೬೬

ಕೆಲಬರುಪಾಂತ್ಯದಕಾರದ
ನೆಲೆಯೊಳೊಕಾರಂ ವಯದ್ವಯಕೌಂಕ್ಯದೈತ್ವಂ ।

---

1 ಕಿಟ್ಕಲಿಸಿ. 2 ನಾಟ್ಕಡಿ (ಅ.ಇ), ಸಾಟ್ಕಡಿ (ಮ). 3 ಪೇಟ್ಪುದು (ಓ.ಮ). 4 ನೆಗಂಟು (ಓ.ಮ), ನೊೞಂಟು (ಅ.ಇ). 5 ನಂ ಕವಿಯೆನ್ನಬಕ್ಕುಮೆ (ಅ). 6 ದಿಗೆ (ಅ). 7 ಳೆನ್ನಪದದೋ (ಅ). 8 ಕುಹರಾ (ಓ.ಮ). 9 ತಪ್ಪ (ಓ.ಮ). 10 ಮೆಚ್ಚಿಸ (ಓ.ಮ). 11 ಯುಂಪತ್ತುಮಂ (ಅ).

ಸಲೆ ಕೂಡೆ ಣಕಾರಂ ಕೇ
ವಲಂ ನಕಾರಕ್ಕೆ ಣತ್ವಮಕ್ಕುಮದೆಂಬರ್ ‖ ೩೦೨

ಪ್ರಯೋಗಂ ‖
ಆವೊಂ ಕಾವೊಂ ಲೋಕಮ
ನಾವೊನಿನಮರರ್ಕಳಮರರೆನಿಸಿದರೊಲವಿಂ ।
ದಾವೊನುರಸ್ಥಳದೊಳ್ ಲ
ಕ್ಷ್ಮೀವಧು ನೆಲಸಿರ್ಪಳಾ ಮುರದ್ವಿಷನೀತಂ ‖ ೩೦೩

ವಕಾರದಳಿತ್ವಕ್ಕೆ ‖
ಕಸವರದಾಸೆಯಿಂ [1]ಪದಪು[1]ದೋರ್ಪಟಿವೆಂಡಿರ ನಲ್ಮೆಯೆಂದು ಭಾ
ವಿಸದಿರು ನೀಂ ಮನೋನಯನವಲ್ಲಭ ಕೂರಿಸಿ ಕೂರ್ತ ನಿನ್ನ ಮೆಯ್।
ಕಸವರಮೆನ್ನನಿನ್ನುಸಿರ[2]ದೌದಲೆಗಾ[2]ಣ್ಚಿನಮುಂದೆ ನಂಬು ಚಿಃ
ಕಸವರಬೇಟಮೆಂಬುದೆರೆಕೊಳ್ವರ ಬೇಟಮದೆನ್ನ ಬೇಟಮೋ ‖ ೩೦೪

ಯಕಾರದ್ಯೈತ್ವಕ್ಕೆ ‖
ಅಸಿತೇಂದೀವರಲೋಲಲೋಚನೆಯನಂದಂತಾ ಸಭಾಮಧ್ಯದೊಳ್
ಪಸುವಂ ಮೋದುವವೋಲೆ ಮೋದೆಯುಮದಂ ಕಂಡಂತೆ ಪಲ್ಗರ್ಚಿ ಸೈ।
ರಿಸಿದೆಂ ನಿನ್ನಯ ನನ್ನಿಗಿನ್ನೆವರೆಗಂ ದುಶ್ಶಾಸನೋರಃಸ್ಥಲೋ
ಚ್ಛ್ವಸಿತಾಸೃಗ್ಜಲಪಾನಮಂ ಬಯಸಿ ಬಾಯ್ ತೇರ್ಕೈಸೆ [3]ಸೈತಿರ್ಪನೇ[3] ‖ ೩೦೫

ನಕಾರಣತ್ವಕ್ಕೆ ‖
ಕಣ್ಣಾರೆ ನೋಡಿ ಮಾವಿನ
ತಣ್ಣೆಲರೊಳ್ ನಲಿವ ಸಿದ್ಧಚಾರಣಗಣಮಂ ।
ಪಣ್ಣನೆ ಬಂದೆಳಗಾಯುರೆ
ಪಣ್ಣನೆ ಪಱಿಪಱಿದು ತಿಂಬ ಬಲಮುಖಕುಲಮಂ ‖ ೩೦೬

## ಸೂತ್ರ ೬೭

ಪೊಯ್ ಬಯ್ ಮತ್ತಾರಯ್ ಗೆಯ್
ಸಯ್ಯೆಂದು ವಿಕಲ್ಪದಿಂ ಯಸಂಯೋಗದೊಳಾ ।
ಶ್ರಯಿಸಿರ್ಕುಂ ಗುರುಲಘು[4]ಗತಿ[4]
ನಿಯಮಮದೇದೋದ್ವಯಕ್ಕಮಕ್ಕುಂ ಪ್ರಾಯಂ ‖ ೩೦೭

1 ಪೊಳ್ಪದಪು (ಅ). 2 ದೌತಲೆಕಾ (ಅ). 3 ಸೈರಿಪ್ಪೆ (ಮ).
4 ತತಿ (ಒ.ಮ).

ಪ್ರಯೋಗಂ ||

ನಡೆ ಕೋಲ್ವರಮಂದಂಬುರ
ದೆಡೆಯುಂ [1]ಪುಣ್ಗೂರ್ತು[1] ಕಾಳವಟ್ಟದ [2]ಕೊಪ್ಪಂ[2] |
ಪಿಡಿದು ನೆಱಲರ್ಕಸುತಂ
ಗಿಡಿಗಂ ಪೊಯ್ಯೆ ನೊಂದ ಭುಜಗನಿರ್ಪಂತಿರ್ದಂ || ೩೦೮

ಮೆಯ್ಯ ಮಸಿ ಕೊರಲ [3]ಬಕ್ಕಳೆ[3]
ಪೊಯ್ಯೆ [4]ಪುಗಿಲ್ಗರೆವ[4] ಕೆಯ್ಯ ಕಂಕರಿಕೆ ಕರಂ |
ರಯ್ಯಮೆನೆ ಪಾಡುತಿರ್ದಳ
ನೊಯ್ಯನೆ ಕಡೆಗಣ್ಣೊಳಡರೆ ಚಪ್ಪರಿಸುತ್ತುಂ || ೩೦೯

ಪಿಡಿದು [5]ಮೆಚ್ಚದೆ[5] ನೋವದೆ ಪೆಂಡಿರಂ
[6]ಜಡಿಯೆಯುಂ ಬಯೆಯುಂ[6] ಬಲಗರ್ವದಿಂ |
ಮಿಡುಕಲಣ್ಮದೆ ನೋಡಿದ ಸಾಸಿಗಂ
ನುಡಿಯದಿರ್ಕುಮೆ ಬೀರಮನಾರೊಳಂ || ೩೧೦

ಸುಯ್ಯ ನಿಡು[7]ಪುಡು[7]ಗದಿರೆಯುಂ
[8]ಮೆಯ್ಯರೆ ಮಟ್ಗದೆ[8]ಯುಮಿಂತು ಸಂದಂದಿನಿಬರ್ |
ಬಯ್ಯಲೆ ಪೊಯ್ಯಲೆ [9]ಕುರುಳಂ[9]
ಕೊಯ್ಯಲೆ ಪೋಯಿತ್ತಂತು ವಿನಯವತಿಗಂ ಪತಿಗಂ || ೩೧೧

ಆರಯೆ ಜಡನಾದೊಡಮಧಿ
ಕಾರಿಯ ಮಾಡಿದುದೆ ಪವಣದಂತಿಂತೆನವೇ |
ಡೂರೂರೊಳುಱುಗನಾದೊಡ
[10]ಮೂರಡಿ[10] ಪವಣೆಂಬುದಲ್ತೆ ನಾಣ್ಣುಡಿ ಜಗದೊಳ್ || ೩೧೨

ಆರಯ್ಯೆ ಸರ್ವಭೂತಾ
ಧಾರಂ ಮೞೆಯುಂ ನೃಪೇಂದ್ರನುಂ ಮೞೆಗಾಲಂ |
ಬಾರದೊಡಂ ನಿರ್ವಹಿಸುವ
ರಾರುಂ ನೃಪನಿಲ್ಲದಂದು ನಿರ್ವಹಿಸುವರೇ || ೩೧೩

ಏಳಿದಂಗೆಯಲಿಮಾಗಡೆ ನಮ್ರೊ
ಳ್ವಾಳನೊಳ್ಗುದುರೆಯುಂ ರಥ[11]ಕಟ್ಯಾ[11] |
ವ್ಯಾಳದಂತಿಕುಲಮಂ ಸಮಕಟ್ಟಿಂ
ಕಾಳೆಗಕ್ಕೆ ತಡೆ[12]ದಿರ್ಪು[12]ದಯುಕ್ತಂ || ೩೧೪

---

1 ಪುಣ್ಗೊರ್ತು (ಅ). 2 ಕೊಳ್ಪಂ (ಒ.ಮ). 3 ಒಕ್ಕಂ (ಅ). 4 ಕನಲ್ಗರೆವ, ಘುರಿಲ್ಗರೆವ. 5 ಮೆಚ್ಚದ (ಅ). 6 ಜಡಿಯಲುಂ ಬಯಲುಂ (ಅ). 7 ಕಡು (ಅ). 8 ಮೆಯ್ಯಡಗಡನಾಗಿಮಟ್ಗೆ (ಅ). 9 ತಲೆಯುಂ (ಅ.ಮ). 10 ಮಾಱಡಿ (ಅ). 11 ಪತ್ತಿ (ಅ). 12 ದಪ್ಪು (ಒ).

ನಿಮ್ಮಿಂ ಪಿಂಬಡಿನೊಳದೇ
ಸಮ್ಮದಮೆಮಗಂ ಧರಿತ್ರಿಗಂ ರಾಜ್ಯದ ಮೋ ।
ಹಮ್ಮಱಿದುಮೊಂದದೆಮ್ಮೊಳ್
ಕೆಮ್ಮನೆ ನೀಮಿನಿತುಮಾಗ್ರಹಂಗೆಯ್ಯದಿರಿಂ ॥ ೩೧೫

ಆಯತಿ ನಿಮಿರ್ವಂತು ಗುಣಾ
ಮ್ನಾಯಮನೊಳಕೊಂಡು [1]ಬೞ್ದೊಡದು[1] ಬಾಪೆನಿಕುಂ ।
ನ್ಯಾಯಮನೊ[2]ಕ್ಕಳೆ[2] ಪೞಿವಿನ
ಮಾಯಂ ಸಯೆ ಬೞ್ದೊಂದು ಬಾೞುಂ ಬಾಪೇ ॥ ೩೧೬

ಕಾಯದೆ ಚಲಮಂ ಪಲರುಂ
ಚೀಯೆನೆ ಪತಿ ಸಾಯೆ [3]ಸಯ್ಯ[3]ಲಂಜಿದ ನಾಯಂ ।
ನಾಯೆಂಬೆ[4]ನಾಳ್ದನಂ ಕಾ
ದಾ[4]ಯತಿ ನಿಲೆ ಸತ್ತ ನಾಯನಾಂ ನಾ[5]ಯೆನ್ನೆಂ[5] ॥ ೩೧೭

ಏಕಾರಕ್ಕೆ ॥

ಕಡಿದಂಭೋಧಿಗಳೇೞುಮಂ ತವಿಪ್ಪುದೇ ಗೋತ್ರಾದ್ರಿಸಂಘಾತಮಂ
ಪಿಡಿದೇಂ ಕೀೞ್ವುದೆ ದಿಗ್ಗಜೇಂದ್ರಚಯಮಂ [6]ಮಾರ್ಪೊರ್[6]ಯ್ವುದೇ ಕೞ್ಟಿ ನಿ ।
ಮ್ಮಡಿಗೊಪ್ಪಿಪ್ಪುದೆ ಲೋಕಪಾಲಕರನಾ ಬ್ರಹ್ಮಾಂಡಮಂ ಚಂಚುವಿಂ
ದೊಡೆದೀಡಾಡುವುದೇ ವಿಹಂಗಮಮಿದೆಂದೇಕಬ್ಬ ನೀಮೋಳಿಪಿರ್ ॥ ೩೧೮

ಒಕಾರಕ್ಕೆ ॥

ತಂದೆಯ ನನ್ನಿಗಿತ್ತನನುಜಂಗೆಳೆಯಂ ರಘುವಂಶನೆಂದು ಚೀ
ಯೆಂದಪ್ಪುದೀ ಜಗಜ್ಜನಮಿದಂ[7]ಸಿರಿ[7]ಗೆಂಬುದೊ ಲೋಭಮೆಂಬುದೋ ।
ಪಂದೆತನಕ್ಕೆ ಮೊತ್ತಮೊದಲೆಂಬುದೊ ಮತ್ತಿನ[8]ನೆಂಬೊಡೂನ[8]ನೆಂ
ಗುಂ ದೊರೆವೆತ್ತನೆಂಗುವೊ ಕುಲೋದ್ಧತನೆಂಗುವೊ ತಕ್ಕನೆಂಗುವೋ ॥ ೩೧೯

ಪ್ರಾಯೋಗ್ರಹಣಕ್ಕೆ ॥

ಎಲೆವಳ್ಳಿಯ ತಳ್ಪಿಂದೇ
ಪೆಲೆವಾಪೆಯ ಪರೆಪಿನಿಂದಶೋಕೆಯ ಪೊದಱಿಂ ।
ಮಲೆವಾಯ್ವ ಲತೆಯ ಪುದುವಿಂ
ತೊಲಗದು ಬನದೊಳಗೆ [9]ಬಳೆದ[9] ಕೞ್ತಲೆ ಪಗಲುಂ ॥ ೩೨೦

ಓಲೆಯನೋಲೆಯೊಳಿಕ್ಕಿದ
ನಾಲೀಢಮನಿಟ್ಟು ಬೇಱೆ [10]ನುಡಿ[10]ದಟ್ಟಿದನೇಂ ।

---

1 ಬಾೞ್ವುದದು (ಅ). 2 ಕ್ಕಳೆ (ಮ). 3 ಸಾಯ (ಓ.ಮ). 4 ನಾಳ್ವನಂ ಕೊಂಡಾ (ಅ). 5 ಯೆಂಬೆಂ (ಅ.ಇ). 6 ಮಾಪಾರ್ (ಅ). 7 ಸೆರ (ಅ). 8 ನೆಂಬುದೂನ (ಅ). 9 ಪೊಳೆದ (ಓ.ಮ). 10 ನಡು (ಅ).

ಚೋಳನೆ ಕೇರಳಧಾತ್ರೀ
ಪಾಲಂ ನುಡಿದಂತೆ ನಾಳೆ ನಿಲ್ಗಾಹವದೊಳ್ ॥ ೩೨೧

ಇದು ಶಬ್ದಸ್ಮೃತಿಯೊಳ್ ಸಮಾಸಪ್ರಕರಣಂ ತೃತೀಯಂ.

---

## ತದ್ಧಿತಪ್ರಕರಣಂ

---

### ಸೂತ್ರಂ ೬೮

ಇವು ಪಣ್ಯಮಿವರ್ಗೆ ಮೇಣಿಂ
ತಿವು ಶಿಲ್ಪಂ ಮೇಣ್ ನಿಯೋಗಮಿವನಱಿವಂ ಮೇ ।
ಣಿವನಾಚರಿಸುವನೆಂದಿಂ
ತಿವಱೊಳಿಗಪ್ರತ್ಯಯಂ ಯಥೋಕ್ತಿಯಿನಕ್ಕುಂ ॥ ೩೨೨

ಪ್ರಯೋಗಂ ॥
ಗಂದಿಗನೆರವಣಿಗಂ ಸರ
ವಂದಿಗನಾಪಟ್ಟಸಾಲಿಗಂ ಬಾಣಸಿಗಂ ।
[1]ಮಾಂದ[1]ರಿಗಂ ಜೋಯಿಸಿಗಂ
ಸಂದಱಿಕೆಯ ಕಬ್ಬಿಗಂ ಸಮಂಜಸನೊಳನೇ ॥ ೩೨೩

### ಸೂತ್ರಂ ೬೯

ಇದಱೊಳಿವಂ ವ್ಯಾಪೃತನೆನೆ
ತದಗ್ರದೊಳ್ ಕಾಱಶಬ್ದಮಕ್ಕುಂ ಕೆಯ್ಕೊಂ ।
ಡಿದನೀತಂ ನಡೆಯಿಪನೆನೆ
ತೊದಳೇಂ ವಳಮೆಂದು ವಳ್ಳಮೆಂದಿವು ನೆಗಳ್ಗುಂ ॥ ೩೨೪

ಪ್ರಯೋಗಂ ॥
ನಗೆವಡಿಕಾಱಂ ನೀಱಿಂ
ಬಗೆಕಾಱಂ ಪಾಟಕಾಱ[2]ನೊಳ್ನುಡಿ[2]ಕಾಱಂ ।
ಪಗೆಕಾಱನಾಗಿಯುಂ ಕೆ
ಯ್ಮಗೆ ತಕ್ಕಂ ಕೆಯ್ದುಕಾಱನೆನಿಸಲ್ಕಾಱಂ ॥ ೩೨೫

---

1 ಮಂದು (ಓ), 2 ನೊಳ್ನಗೆ (ಓ.ಮ).

ಅಡಪವಳಂ ಪಡೆವಳ್ಳಂ
ಮಡಿವಳ್ಳಂ ಸೆಜ್ಜೆವಳ್ಳನಜ್ಜಂ ಬೆಜ್ಜಂ ।
[1]ಅಡ ವಳ[1]ನೆಂದಿಂತಿವರಂ
ಕಡಂಗಿ ಬಿಡೆ ಜಡಿಯದಿರ್ಕೆ ನಯಮಱಿವರಸಂ ॥ ೩೨೬

## ಸೂತ್ರಂ ೭೦

ಇದನೀತಂ ಮಾಡ್ಟನೆನಿ
ಪ್ಪುದಱೊಳ್ ಗಾಱಪ್ರಯೋಗಮಕ್ಕುಮಪಭ್ರಂ ।
ಶದೊಳಮದೆ ವರ್ತಿಕುಂ ಮ
ತ್ತದರ್ಕೆ ಕರ್ಮಾದಿಯಾದೊಡಾದಿಗೆ ಲೋಪಂ ॥ ೩೨೭

ಪ್ರಯೋಗಂ ॥
ಅಣಿಯರಮೆಸೆದೊಪ್ಪಿರ್ಪುವು
ಮಣಿಗಾಱರ ಕಂಚಗಾಱರೊಱೆಗಾಱರ ತಿಂ ।
ತಿಣಿಯೆನಿಪ ಮಾಲೆಗಾಱರ
ಗಣನಾತೀತಂಗಳಾಪಣಂಗಳೆ ಪೊಟಲೊಳ್ ॥ ೩೨೮

ಆದಿವರ್ಣಲೋಪಕ್ಕೆ ॥
ಅಱಿದು ನರ[2]ನೊವಜರೆನ್ನಂ[2]
ಕುಱಿಗೋಣ್ಡಱ[3]. . .[3]ನದಱನೊಡ್ಡಿಸಿದಂ ಕ ।
ಮ್ಮಱನಂಬು ಕಮ್ಮಱಂಗೆಂ
ದಱಿಯದೆ ನುಡಿವಂತು ನಾಡವರ್ ಗಾವಿಲರೇ ॥ ೩೨೯

## ಸೂತ್ರಂ ೭೧

ಈ[4]ಪೇೞ್ದ[4]ನಿತುಂ ಶಬ್ದಕ
ಳಾಪಂ ಸ್ತ್ರೀವಿಷಯಮಾ[5]ದೊಡಿತಿ[5]ಪರಮಕ್ಕುಂ ।
ರೂಪಾನ್ಯತ್ವದೊಳಾದಿಗೆ
ಲೋಪಂ ತತ್ಪ್ರತ್ಯಯಕ್ಕೆ ಸಂಭವಿಸಿರ್ಕುಂ ॥ ೩೩೦

ಪ್ರಯೋಗಂ ॥
ಮಡಿಯಂ ಮಡಿವಳ್ತಿಯವೋಲ್
ಬಿಡದಮೃತಾನ್ನಮನೊಱಲ್ದು ಬಾಣಸಿಗಿತಿವೋಲ್ ।
ಕುಡು[6]ತಿರ್ದಳ್[6] ಪೂಮಾಲೆಯ
ನೆಡೆಯುಡುಗದೆ ಮಾಲೆಗಾರ್ತಿವೋಲ್ ಮತ್ತೊರ್ವಳ್ ॥ ೩೩೧

---

1 ಅಡಬಳ (ಓ.ಮು). ಅಡೆಬಳ (ಅ). 2 ನೋದಜನ್ನಂ (ಅ). 3 [ದಱದ]. 4 ಪೇೞ್ದ (ಓ). 5 ದೊಡಂ (ಅ). 6 ತಿರ್ಪಳ್ (ಅ).

## ಸೂತ್ರಂ ೭೨

ಇಂತಿದು ವಿಭಾಷೆಯಿಂ ವ
ರ್ಣಾಂತರದೊಳಮಕ್ಕುಮುಱಿದ ಗುಣವಚನಮುಕಾ ।
ರಾಂತಮು[1]ಳಂ[1]ತಂ ಸ್ತ್ರೈಣದೊ
ಳಂತವಱಿಂ ಪೆಱವು ಪುಂಸ್ತ್ವದೊಳ್ [2]ಸಮರೂಪಂ[2] ॥ ೩೩೨

ಪ್ರಯೋಗಂ ॥
ಒಕ್ಕಲಿತಿ ಜೋಡೆಯಾದಂ
ತಕ್ಕು[3]ಮವಳ್[3] ಸಿತಗೆ ಪತಿಗೆ ಮಿಗೆ ಕಾಯ್ವಳ್ ನೋ ।
ಟಕ್ಕೆ ಕಡುಸೊಂದಿ ನಾಣಿಲಿ
ಬಕ್ಕಂಬಯಲೊಳಮದಾರುಮಂ [4]ಬಂಚಿ[4]ಸುವಳ್ ॥ ೩೩೩

## ಸೂತ್ರಂ ೭೩

ಅಲ್ಲಿಯೆ ಪುಟ್ಟಿದನಿಂತಿವ
ನಲ್ಲಿಯೆ ತಾಂ ಬಳೆದನೆಂದು ಪೇೞ್ವರ್ಥದೊಳಂ ।
ತೆಲ್ಲಮಿಚಪ್ರತ್ಯಯಮಿಂ
ತಲ್ಲಿ ಯಥಾಲಕ್ಷ್ಯಮಾದಿಗಕ್ಕುಂ ಹ್ರಸ್ವಂ ॥ ೩೩೪

ಪೊಟಲಿಂದ್ರಪುರಂ ಕಾಲೂರ್
ಪೊಟಲಿಂದ್ರರ್ ಪೊಟಲ ಮಾನಸರ್ ಕಾಲುರಿಚರ್ ।
ಪೊಟಲಿಚರೆನೆ ಸೊಗಯಿಸುವುದು
ಪೊೞಲಿಂ ಕಾಲೂರ್ಗಳಿಂದಮಂತಾವಿಷಯಂ ॥ ೩೩೫

## ಸೂತ್ರಂ ೭೪

ಅಲ್ಲಿ ಇದುಂಟೆಂಬರ್ಥದೊ
ಳೆಲ್ಲಿಯುಮುಳ್ಳೊಡೆಯುವಂತಶಬ್ದ [5]ಮವಕ್ಕುಂ[5] ।
ಎಲ್ಲಂದದೊಳಂ ಪೋಲಿಸು
ವಲ್ಲಿ ಗುಣಾಧಿ [6]ಕರೊ[6]ಳಂತೆ [7]ಪೋಲ್ ತಾನಕ್ಕುಂ[7] ॥ ೩೩೬

ಪ್ರಯೋಗಂ ॥
ಸಿರಿಯೊಡೆಯಂ ಸಿರಿಯುಳ್ಳಂ
[8]ಸ[8]ರೂಪಿ ಗುಣವಂತನಧಿಕದಾನಿ [9]ಮಹೇೞ್ಚಂ[9] ।

---

1 ದಂ (ಅ). 2 ಸ್ತ್ರೀರೂಪಂ (ಅ). 3 ದವಳ್ (ಇ). 4 ಭಂಜಿ. 5 ಮುಮಕ್ಕುಂ (ಅ). 6 ಕದೊ (ಅ). 7 ಪೋಲೆನಲಕ್ಕುಂ (ಅ). 8 ಸು (ಅ). ಸ್ವ (ಮ). 9 ಮಹಾಂತಂ (ಅ).

ನರರೊಳಿವನೆನಿಸಿ ಬಾಳ್ವುದು
ಪುರಾತನೋದಾತ್ತಪುಣ್ಯಪರಿಪಾಕಫಲಂ ॥ ೩೩೭

ಅಪರಾರ್ಧಕ್ಕೆ ॥
ಸುರಪತಿಯಂತೆ ವಿಸ್ಫುರಿತನೇತ್ರಸಹಸ್ರವಿರಾಜಿತಂ ನರೇ
ಶ್ವರಧವನಾಗ್ರದಂತೆ ದೃಢವೇತ್ರಲತಾಶತದುಷ್ಪ್ರವೇಶಮುಂ ।
ಬರತಳದಂತೆ ಋುಕ್ಷಮೃಗಲುಬ್ಧಕಸಂಗತಮಂಬುರಾಶಿಯಂ
ತಿರೆ ತತವಿದ್ರುಮದ್ಯುತಿ ನಿರಂತರಮೊಪ್ಪುಗುಮಾ ವನಾಂತರಂ ॥ ೩೩೮

ಕರಿವೋಲ್ ಭದ್ರಗುಣಂ ಕೇ
ಸರಿವೋಲ್ ನಿರ್ವ್ಯಾಜಶೌರ್ಯನಂಭೋನಿಧಿವೋಲ್ ।
ಶರಣಾಗತರಕ್ಷಣಪಟು
ಗಿರಿವೋಲ್ ನಿಷ್ಕಂಪಚಿತ್ತನಾ ನೃಪ[1]ತುಂಗಂ[1] ॥ ೩೩೯

## ಸೂತ್ರಂ ೭೫

ಅವಱೊಳ್ ವೋಲ್ಗಕ್ಕುಂ ಹ್ರ
ಸ್ವವಿಧಾನಂ ಪಾಕ್ಷಿಕಂ ಮಕಾರಾಗಮದಿಂ ।
ವ್ಯವಧಾನಮವರ್ಣಕ್ಕ
ಕ್ಕುವಲ್ಲಿ ಬಶ್ರುತಿ ವಕಾರದೊಳ್ ನೆಲೆಗೊಳ್ಗುಂ ॥ ೩೪೦

ಪ್ರಯೋಗಂ ॥
ಪೂರ್ವಾರ್ಧಕ್ಕೆ ॥
ಶ್ರೀಯ ಜವ್ವನ [ದ] ರೂಪಿನ ಗಾಡಿಯು ಪೆಂಪಿನೊಂ
[2]ದಾಯು[2] ತಾನೆ ನಡೆತರ್ಪವೊಲೊಪ್ಪಿರೆ ಬಂದಭಿ ।
ಪ್ರಾಯಸಿದ್ಧಿಯನೆ ಚಿಂತಿಸುತುಂ ಮನದೊಳ್ ಜಯ
ಶ್ರೀಯ ದೂದವಿವೊಲಾ ಸತಿ ಕಂಡು ಶಿಖಂಡಿಯಂ ॥ ೩೪೧

ಅಪರಾರ್ಧಕ್ಕೆ ॥
ನಿಗಳಂಬೊಲ್ ತೊಡರ್ದಿರ್ದ ಮೋಹನಿಗಳಂ ನಿರ್ವ್ಯಾಕುಳಂ ಪಿಂಗೆ ಮ
ತ್ತಗಜೇಂದ್ರಂಬೊಲಲರ್ಗಳಂ [3]ವನ[3]ಮನಂದಾನಂದದಿಂ ಪೊಕ್ಕನಾ ।
ವಗಮಾದಟ್ಕಳಿಳುರ್ಕೆಯಿಂ ಮಕುಟಬದ್ಧರ್ ನೂರ್ವರಂತಲ್ಲಿ ದೀ
ಕ್ಷೆಗೊಳಲ್ ತನ್ನೊಡವೋಗೆ ನಿಶ್ಚಿತಮನಂ ಶ್ರೀಚಂದ್ರಭೂವಲ್ಲಭಂ ॥ ೩೪೨

## ಸೂತ್ರಂ ೭೬

ತನಮಿಕೆಯುಮೆಂಬಿವುಂ ಚೇ
ತನಭಾವದೊಳಕ್ಕುಮುಟಿದ ಭಾವಾರ್ಥದೊಳಂ ।

1 ಪುತ್ರಂ (ಅ). 2 ದಾಯ (ಓ.ಮ). 3 ಸರ (ಓ).

ತನಿತಱೊಳಂ ಪು ಕೆ ಯೆಂಬಿವು
ಜನಿಯಿಕುಮಂತಲ್ಲಿ ಕದ್ವಿರುಕ್ತಿ ವಿಕಲ್ಪಂ ॥ ೩೪೩

ಪ್ರಯೋಗಂ ॥

ಕಡುಗಲಿತನಮುಂ ಚಾಗದ
ಪೊಡರ್ಪುವೊಳ್ಪುಡಿಯೊಳಾದ ಮಾನಸಿಕೆಯುಮು ।
ಕರ್ಱಡುಗದ ಶೌಚಮುಮಾಯದ
[1]ಪಡೆವಾತುಂ[1] ಪೆರ್ಮೆ[2]ವಡೆದುವ[2]ವನಿಂದಿಳೆಯೊಳ್ ॥ ೩೪೪

ಅಪರಾರ್ಧಕ್ಕೆ ॥

[3]ವಾರಿಧಿಯದೊಂದು[3] ಗುಣ್ಪುಂ
ಧಾರಿಣಿಯ ಪೊಗಱ್ತೆವೆತ್ತ ಪೆಂಪಿನ ತಿಣ್ಪುಂ ।
ಮೇರುವಿನ ಬಿಣ್ಪುಮಾ ನೃಪ
ಧೀರನೊಳೊಂದಾಗಿ ನಿಂದುವೆನ್ನದರೊಳರೇ ॥ ೩೪೫

ನಮಿತಾರಿಗೆ ದಮಿತಾರಿಗೆ
ಸಮಸ್ತಧಾತ್ರೀವಿಭಾಗದೊಳ್ ಭಾವಿಸೆ ವಿ ।
ಕ್ರಮದ ನಿಮಿರ್ಕೆಗಮಾಯತಿ
ಯಮರ್ಕೆಗಂ [4]ಪೇಟಿ ಪೋಲ್ಕೆ[4]ಗಾವಂ ಬರ್ಪಂ ॥ ೩೪೬

ಕಕಾರದ್ವಿತ್ವಕ್ಕೆ ॥

ಬೇಸಱದಾಸಱದೆ ವನಾ
ವಾಸಂಗಳೊಳುನ್ನತಿಕ್ಕೆ [5]ನಿಲೆ[5] ನವೆದವರೊಳ್ ।
[6]ನೇ[6]ಸನ್ನಿಕೆಯಿಂ ಕುರುಪತಿ
ಬೀಸರಮಂ ನುಡಿಯದೊಳ್ಳಿತಂ ನುಡಿದಪನೇ ॥ ೩೪೭

## ಸೂತ್ರಂ ೭೭

ಒಂದೆರಡು ಮೂಱು ನಾಲ್ಕ
ಯ್ದೊಂದಿನಿತರ್ಕಂ ಬಹುತ್ವವಾಚಿಗಳ[7]ಮರ್ದಂ ॥
ತೊಂದಿ[7] ನೆಗಟ್ಟುಗಂ ವಿಕಲ್ಪಂ
ಸಂದಿಸಿ ನೆಲಸಿರೆ ಮೆ ಯೆಂಬುದಕ್ಕುಂ ಸೂಟೊಳ್ ॥ ೩೪೮

1 ಪಡೆಮಾತುಂ (ಓ.ಮು). 2 ವಡೆಗುವು (ಅ). 3 ವಾರಿನಿಧಿಯೊಂದು, ವಾರಿಧಿಯೊಂದು (ಓ.ಮು). 4 ಪೇಡ್ಪೋಣರ್ಕೆ (ಓ.ಮು). 5 ಗಿಡೆ (ಅ). 6 ನೀ (ಓ.ಮು). 7 ಮರ್ದತ್ತೊನ್ದಿ (ಓ.ಅ).

ಪ್ರಯೋಗಂ ॥

ಶಯುದಂಷ್ಟ್ರಾವಿಷದಂಶವೊಂದೆ ಜತುಗೇಹೋದ್ದೀಪನಂ ತಾನದೊಂ
ದೆ ಯಥೇಷ್ಟಪ್ರಕೃತಂ ದುರೋದರಜಯಂ ಮತ್ತೊಂದೆ ಕಷ್ಟಪ್ರತಿ ॥
ಕ್ರಿ[1]ಯೆಯುಪ್ಪಾ[1]ವಿಷದೂಷಿತಾಶನಮದಂತೇನೊಂದೆ ಪೇಳ್ವಾಗಳೊ
ರ್ವರ್ಗೆಯೊ [2]ಮೇಣ್[2]ರ್ವರ್ಗೆಯೊ ಮೂವರ್ಗೆಯೋ ಕುರುಕುಳಪ್ರಾರಬ್ಧದುರ್ವ್ಯ
ತ್ತಕಂ ॥ ೩೪೯

ನೂರ್ವರ್ಗೆ ಪಶು ಕಱೆವುದಂ ತಾ
ನೊರ್ವರ್ಗೆಯೆ ಕಱೆವರ್ಗೆಯಲ್ಲದಟಿಯುರ್ವರ್ಗಗಳೀ ॥
ಯೆರ್ವರ್ಗಗಳೊಳಗಿಲ್ಲೆನಿಸಿ
ದೆರ್ವರ್ಗೆಯ ಪಿಂಡುಗಳಿನೊಪ್ಪುಗುಂ ಕೆಲವೆಡೆಯೊಳ್ ॥ ೩೫೦

ವಿಕಲ್ಪಕ್ಕೆ ॥

ತನಗಿಂಬಪ್ಪುದನಾಯ್ದು ನೋಡಿ ಪಲವುಂ ಬಿಲ್ವಿಲ್ಲಗಳೊಳ್ ಬಿಲ್ಲನೊಂ
ದನೆ ಕೊಂಡೇಱಿಸಿ ನೀವಿ ಜೇವೊಡೆದಡುರ್ತೊಂದಂಬಿನಿಂದೊಂದು [3]ಸೂ ॥
ಟ್ಯ[3]ನೆಯಂ ಪಾವಿನ ಬೆನ್ನೊಳಾದುವನತಿಪ್ರಾರಂಭದಿಂದೇಱುಮಂ
ಜನಕಾಧೀಶತನೂಜೆಯಾಣ್ಮನಿಸುವಂತೆಚ್ಚಂ ಮಹೇಂ[4]ದ್ರಾಂತಕಂ[4] ॥ ೩೫೧

## ಸೂತ್ರಂ ೭೮

ಆಳಿಪ್ರತ್ಯಯಮಕ್ಕುಂ
ಶೀಳಾದ್ಯರ್ಥಂಗಳಂ ವಿವಕ್ಷಿಸೆ ಪೆಱತೊಂ ॥
ದಾಳಾಪಮಂತದೇನೊ ಯ
ಥಾಳೋಕನಿರೂಪಿತೋಕ್ತಿಗಳ್ಗನುಸಾರಂ ॥ ೩೫೨

ಮಾಱಾಳಿಯುಮೋದಾಳಿಯು
ಮೇಱಾಳಿಯುಮಪ್ಪನಾಗಿ [5]ಪಡೆ[5]ಪಾಳಿಯೆ ಕೇಳ್ ॥
ನೀಱಂ ಜೂದಾಳಿ ಕರಂ
ನೀಱಂ ಮಾತಾಳಿ ಕರೆಯೆ ಸಿಗ್ಗಾ[6]ಳಿಯಿವಳ್[6] ॥ ೩೫೩

## ಸೂತ್ರಂ ೭೯

ಅದುವಿದುವುದುವೆಂಬಿಂತೀ
ವಿದಿತಾರ್ಥದ ಸರ್ವನಾಮಶಬ್ದಕ್ಕಕ್ಕುಂ ॥
ತದುಪಾಧಿವಿಹಿತ ಪರಿ[7]ಮಾ
ಣ[7]ದೊಳನಿತಿನಿತೆನಿತೆನಿಪ್ಪ ರೂಪನಿಪಾತಂ ॥ ೩೫೪

1 ಯುಮುಪ್ಪಾ (ಓ.ಮ). 2 ಪೇಟಿ (ಅ). 3 ಸೂಟ (ಅ). 4 ದ್ರಾತ್ಮಕಂ (ಅ).
5 ಪಡ (ಓ.ಮ). 6 ಳಿಯಾವಂ (ಓ), ಳಿಯಿವಂ (ಅ), ಳೆಯವಂ (ಮ). 7 ಣಾಮ (ಅ).

ಅನಿತೊಂದಣ್ಮನಿತೊಂದು ದರ್ಪಮನಿತೊಂದೌದ್ಧತ್ಯಮುಂ ಮುನ್ನ[1]ಮಾ
ದ[1]ನೊಳಿನ್ನಪ್ಪನೊಳುಂಟೆ ದಾನವರೊಳೆಂಬುದ್ವೃತ್ತನಂ ನಾರಸಿಂ ॥
ಹನ ರೂಪಿಂ ನಖದೊಳ್ ವಿದಾರಿಸಿ ಕುಸುಂಭಾರಕ್ತಮಂ ಪಟ್ಟಿಗಾ
ಱನೆ ಪಾಸಂ [2]ತವೆ[2] ತೋಡುವಂತೆ ಕರುಳಂ ನೀಂ ತೋಡಿದೈ ದೈತ್ಯನಾ ॥

ಇನಿತಟಲುಮಿನಿತು ಮಱುಕಮು
ಮಿನಿತು ಮನಃಕ್ಷತಮುಮಾವನಿಂದಾದುದವಂ ॥
ಗಿನಿತಟಲನಿನಿತು ಮಱುಕಮ
ನಿನಿತು ಮನಃಕ್ಷತಮನ[3]ಬ್ಬ[3] ಮಾಡದೆ ಮಾಣಂ ॥ ೩೫೭

ಜನನೀಜನಕಸಹೋದರ
ವನಿತಾಸುತ[4]ಪೌತ್ರಮಿತ್ರ[4]ಸಂಬಂಧಮದಂ ॥
ತೆನಿತೆನಿತು ಭವದೊಳಾಯ್ತು
ಳ್ಳೆನಿತೆನಿತಂ ನೆನೆವುದೆನಿತನವಧರಿಸುವುದೋ ॥ ೩೫೭

ವ॥ ಇವರ್ಕೆ ದ್ವಿತ್ವಪ್ರಯೋಗವುಂ ಸೂತ್ರನಿರ್ದೇಶದೊಳ್ ಜ್ಞಾಪಕ[5]ಸ್ಥಿತ[5]ಮಕ್ಕುಂ ॥

ಕಾಯಲುಂ ಬಲಗರ್ವದಿಂ ನೆಲನೆಲ್ಲಮುಂ ನೆಲಕೆಲ್ಲಮಾ
ಶ್ರೀಯಲುಂ ತನಗಾ ಚತುರ್ಭುಜಮುಂ ಭುಜದ್ವಯಮಾದನಿ ॥
ತ್ತಾಯದಾಯತಿ ತೋಳೊಳೊಪ್ಪಿರೆ ಮಿಕ್ಕ ಪೆಂಪಿನ ಕೀರ್ತಿನಾ
ರಾಯಣಂ ದಯೆಗೆಯ್ಗೆ [6]ಚಾಗ[6]ಚತುರ್ಭುಜಂ ಗರುಡಧ್ವಜಂ ॥ ೩೫೮

ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ ॥
ಅನಿತ್ತನಿತ್ತಂ ವನದೊಳ್ ವನೇಚರಂ
ತನತ್ತು ಬಿಲ್ಲಾನದನಂತು [7]ಕೀಸುಗುಂ[7] ॥ ೩೫೯

## ಸೂತ್ರಂ ೮೦

ಮತ್ತಮವರ್ಕಕ್ಕುಂ ಸಮು
ಪಾತ್ತ ನಕಾರಂ ಪ್ರಕಾರಕಾಲಾರ್ಥಂ ಮೆ ।
ಯ್ವೆತ್ತಿರೆ ತುದುವೆಂಬಿವು ವಿ
ದ್ಯೋತ್ತಮರೀ ತೆಱದಿನಱಿಗೆ ಪೆಱವುಮ[8]ನಿದಱೊಳ್[8] ॥

---

1 ಮಾರ (ಓ.ಮ). 2 ತನೆ, ತಸೆ (ಅ). 3 ಬೆ (ಅ). 4 ಮಿತ್ರಪುತ್ರ (ಓ). 5 ಸಿದ್ಧ (ಅ). 6 ಭಾಗ (ಅ). 7 ಕೀಸುವಂ (ಅ.ಮ). 8 ನಿವಱೊಳ್ (ಅ).

ಪ್ರಯೋಗಂ ||

ಪ್ರಕಾರಾರ್ಥಕ್ಕೆ ||

ಅಂತು ಕಾಡುಗುವೆ ಲೋಕಮನಿಂದ್ರಂ
ಗಂತು ಮಾಡುಗುವೆ ಬನ್ನಮನೋಪ್ರೋ |
ಅಂತು ಸೂಡುಗುವೆ ಕೇಸುರಿಯಂ ಪೇ
ಳಂತು ಕೂಡುಗುವೆ [1]ಬೀರಮದಾರ್ಗಂ[1] || ೩೬೧

ಇಂತಿಂತೆ ಪಲಬರುಂ ತ
ತ್ಸಂತತಿಯೊಳೆ ಕಟಿದು ಪೋಗೆ ಜನಿಯಿಸಿದಂ ದು |
ಷ್ಯಂತಂ ದುಷ್ಯಂತಂಗಮ
ನಂತಗುಣಂ ಭರತರಾಜ[2]ನಾದಂ[2] ತನಯಂ || ೩೬೨

ಎಂತೆಡಱುದಯೆಂತುರ್ಕಿದ
ಯೆಂತೊದವಿದಯೆಂತು ಮಗುಟ್ದಯೆಂತೊದಱುದಯಾ |
ಯ್ತೆಂತೆನಗಿದಿರ್ಚಿದಯ್ ಮಗು
[3]ಟ್ದಿಂ[3] ತೊಡರದಿರೆನೆ ಸಿತಾಶ್ವನೆಂದಂ ಕರ್ಣಂ || ೩೬೩

ಕಾಲಾರ್ಥಕ್ಕೆ ||

ಮುನಿಸಿಂ ಮೇಲೆತ್ತಿ ಬರ್ಪಂದಿನ ವಿಪುಳಶಿಲಾಸ್ತಂಭಮಂ ಕೀಱಿ ಕೀಲ್ವಂ
ದಿನ ಬೆಂಕೊಂಡಟ್ಟಿ ಕೊಲ್ವಂದಿನ ತಿರಿಪಿ ಕಪಿತ್ಥಾವನೀಜಾತದಿಂದಂ |
ಬನದೊಳ್ ಮೆಯ್ವೆರ್ಚಿ ಪೊಯ್ವಂದಿನ ನಿಜಭುಜವಿಕ್ರಾಂತಮೇನಾದುದಿಂತೀ
ಜನಮೆಲ್ಲಂ ನೋಡೆ ಚೌವಟ್ಟದ ಬಿಸುಪುಡಿಯೊಳ್ ಬಿಟ್ದು ಸಾವಂತುಟಾಯ್ತೇ ||

ಇಂದು ಪಿಂಗಿದುವೆಮ್ಮ [4]ಪೀಡೆ[4]ಗಳಿಂದು ಸಾರ್ದುವು ಸಯ್ಪು ತಾ
ವಿಂದವೋಪುಫಲಂಗಳಾದುವು ಯಜ್ಞದಾನಸಮಾಧಿಗಳ್ |
ಇಂದು ನಂಬಿದೆವಾವುಮೆಮ್ಮ ನೆಗಟ್ತೆಯೊಳ್ಪನದಲ್ಲದೆ
ಮ್ಮಿಂದುವಂಶಮುಮಿಂದು ನಿರ್ಮಳಮಾದುದಿಂದುಧರೋಪಮಾ || ೩೬೪

ಎಂದಮರರನಱಿಯುಟ್ಟುವೆ
ನೆಂದಮರಾವತಿಯನೀಟ್ದುಕೊಳ್ವೆಂ ಶಕ್ರಂ |
ಗೆಂದಭಿಭವಮಂ ಮಾಡುವೆ
[5]ನೆಂದಲ್ಲಿ[5] ಪಲುಂಬಿ ಚಿಂತಿಕುಂ ದನುತನಯಂ || ೩೬೬

ಅಲ್ಲಿ ಪೆಱವು ಗ್ರಹಣಕ್ಕೆ ||

ವಿರಹದೊಳಾದ ವೇದನೆಯನಾಱಿಸಲಾಮರನೊಳ್ಳಿತೆಂದು ಮಾ
ಮರದ ನೆಟಲ್ಗೆ ಪೋಪೆ ಗಡ ಕಾಮನ ಡಾಮರಮಲ್ಲಿ ಕೋಕಿಲೇ |

---

1 ಸಾಹಸಮಾರ್ಗಂ (ಓ.ಮ). 2 ನೆಂಬಂ(ಓ). 3 ಟ್ದಂ. 4 ಡೇಸೆ, ಸೇದೆ (ಮ). 5 ನೆಂದೆಂದು (ಮ).

ತ್ಕರ[1]ರವಮಲ್ಲಿ[1]ಚಾವಳಿಪ ರಾಜಶುಕವ್ರಜಮಲ್ಲಿ ಕಾಯ್ದು ಪ
ಲ್ಮೊರೆವ ಮದಾಳಿಯಲ್ಲಿ ಸಖಿ ಸಾರದಿರಾ ಮರನಂ ವಸಂತದೊಳ್ ॥ ೩೬೭

## ಸೂತ್ರಂ ೮೧

ಗಣನಾವಿಶೇಷಪರಿಪೂ
ರಣದೊಳಮನಿತಿನಿತೆನಿತ್ತು ಶಬ್ದಂಗಳ ಪೂ ।
ರಣದೊಳಮನೆಯಪ್ರತ್ಯಯ
ಮೊಣರ್ದು ಸಮಂತೊಂದಿ ತೋಱುಗುಂ ತದ್ಧಿತದೊಳ್ ॥

ಪ್ರಯೋಗಂ ॥

ಜಿನಮದನರೊಳಗೆ ಪದಿನಾ
ಱನೆಯಂ ತತ್ಸಕಲಚಕ್ರವರ್ತಿಗಳೊಳಗ ।
ಯ್ದನೆಯನೆನೆ ಪುಣ್ಯಪುಂಜಾ
ರ್ಜನಕ್ಕೆ ಶಾಂತೀಶನಂತು ನೋಂ[2]ತರುಮೊಳರೇ[2] ॥ ೩೬೯

ಇನಿತನೆಯ ಭವದೊಳಿಂತಾ
ಯ್ತಿನಿತನೆಯ ಭವಾಂತರಂಗಳೊಳ್ ಮತ್ತಂ ಮೇ ॥
[3]ಲನಿತು[3] ಸುಖದುಃಖಫಲಮುಂ
ಜನಿಯಿಕುಮೆಂದಱಿವುದರಿದು ಸಂಸೃತಿಗತಿಯೊಳ್ ॥ ೩೭೦

## ಸೂತ್ರಂ ೮೨

ಇರೆ ತದ್ಧಿತಪ್ರಯೋಗಂ
ಪರದೊಳ್ ಚರಮಸ್ವರಕ್ಕೆ ಲೋಪಮದಕ್ಕುಂ ।
ನಿರವಿಸಿ ಮುನ್ನೆ ಸಮಾಸಾಂ
ತರದೊಳ್ ಪೇೞ್ದೊಂದು ಕಾರ್ಯಮುಂ ಬಂದಿರ್ಕುಂ ॥ ೩೭೧

ಪ್ರಯೋಗಂ ॥

ತೊಟ್ಟು ತೀವಿ ಬಳೆಯಂ ನಿಡುದೋಳ್ಗಳೊಳೊಂದುವಂ
ತುಟ್ಟು ಪೆಣ್ಣುಡೆಯ[4]ನಾಡಿಸಿ[4] ಬಾಲ್ಟ ಶಿಖಂಡಿ ಮುಂ ।
ನೆಟ್ಟನರ್ಜುನನ ಸಾರಥಿಯೆಂಬುದನೀಗಳೀ
ಘಟ್ಟಿವಳ್ತಿ ನುಡಿದಳ್ ತಿಳಿವಂತೆಮಗೆಲ್ಲಮಂ ॥ ೩೭೨

ಒರ್ಮೆ ಪೋಗಿ ಮೃಗಯಾನಿಮಿತ್ತದಿಂ
ಧರ್ಮಮಂ ಮಱೆದು[5]ನೋಡ[5] ಬೇಡಿದೊಂ ।

---

1 ವಳಮಾರೆ (ಅ). 2 ತವತೊಳರೇ (ಓ.ಮ). 3 ಗಿನಿತು (ಅ). 4 ನಾಟಿಸಿ (ಅ). 5 ನೋಡಿ (ಅ.ಓ).

ಪೆರ್ಮೆಗೆಟ್ಟು ಜಮದಗ್ನಿಯುಂ ನೃಪಂ
ದುರ್ಮದಂ ಸುರಭಿಯಂ ವಿಮೋಹದಿಂ ॥ ೩೭೩

ಇದು ಶಬ್ದಸ್ಮೃತಿಯೊಳ್ ತದ್ಧಿತಪ್ರಕರಣಂ ಚತುರ್ಥಂ

---

# ಆಖ್ಯಾತಪ್ರಕರಣಂ

---

## ಸೂತ್ರಂ ೮೩

ಭೂತವತಿ ವರ್ತಮಾನಂ
ಖ್ಯಾತಭವಿಷ್ಯಂತಿ ಸರ್ವಸಾಧನಿ[1]ಯೆಂಬಾ[1] ।
ಖ್ಯಾತವಿಭಕ್ತಿಗಳಕ್ಕುಮ
ತೀತಭವದ್ಭಾವಿಕಾಲವಿಧ್ಯಾದಿಗಳೊಳ್ ॥ ೩೭೪

ಪ್ರಯೋಗಂ ॥

ಭೂತವತಿಗೆ ॥

ತ್ರಿಭುವನರಾಜ್ಯಪಟ್ಟದೊಡವುಟ್ಟಿದನಾವಿಭು ಪುಟ್ಟಿ[2]ದಂತೆ ತಾಂ[2]
ರಭಸದೆ ಸಿಂಹವಿಷ್ಟರಮನೇಱಿದನೆತ್ತದೆ [3]ತಾಮ[3] ಮುಂದೆ ಬಂ ।
ದಭಿಮತಮಪ್ಪ ಬೆಳ್ಗೊಡೆಗಳುಂ ನೆಗೆದೊಪ್ಪಿದುವಿಂ[4]ತೆ[4] ದಲ್ ಜಗ
ತ್ಪ್ರಭುತೆ ಜಗತ್ತ್ರಯಂಗಳೊಳಗಗ್ಗಳಮಾದುದು ದೈತ್ಯರಾಜನಾ ॥ ೩೭೫

ವರ್ತಮಾನಕ್ಕೆ ॥

ಎಸಗಿದುದೀಗಳೀಗಳಿನಿಸೊಯ್ಯನೆ ತೆಂಕಣ ಗಾಳಿ ಕೋರಕ
ಪ್ರಸರ[5]ದಿನೀ[5]ಗಳೀಗಳೆಸೆ[6]ದಪ್ಪುದು[6] ಚೂತಮಹೀಜಮೆಯ್ದೆ ರಾ ।
ಗಿಸಿ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೇ
ಱಿಸಿದಪನೀಗಳೀಗಳೆಲೆ ಸುಗ್ಗಿಯದೊಂದು ಪೊಡರ್ಪಿದಾಗದೇ ॥ ೩೭೬

ಭವಿಷ್ಯಂತಿಗೆ ॥

ಕಡುಕೆಯ್ದಾಂತನ್ಯಸೈನ್ಯಂಗಳನಳಱಿ ಭರಂಗೆಯ್ದು ನಿಮ್ಮೊಂದೆ ಮೆಯ್ಯೊಳ್
ಕಿಡಿಸಲ್ [7]ಸಾಲ್ವರ್[7] ಸಮಾಸಾದಿತರಣರಸಿಕರ್ ನಿಮ್ಮ ಮುಂದಾದಮಣ್ಮಂ ।

---

1 ಯೆಂದಾ. 2 ದನ್ತಿರಾ (ಅ). 3 ತಾನೆ (ಮ). 4 ತು (ಒ.ಮ). 5 ದೊಳೀ (ಅ). 6 ದಿರ್ದುದು (ಅ). 7 ಸಾರ್ವಿರ್ (ಅ).

ನುಡಿವಾಗಳ್ [1]ನಾಡೆ[1] ಲಜ್ಜಾಕರಮುದಱಿನದಂತಿರ್ಕೆ ಜೀಯೆಂಬಿನಂ ಮಾ
ರ್ಪಡೆಗೆನ್ನೀ ಬಾಳಕೇಳೀವಿಳ[2]ಸನ[2]ಮನದಂ ಯುದ್ಧದೊಳ್ ನಾಳೆ ತೋರ್ಪೆಂ ॥

ವಿಧ್ಯಾದಿಗೆ ॥

[3]ಮಾರ್ಚದಿರು[3] ಬಸನಮಂ ಗಿಳಿ
ಗರ್ಚದಿರು ಖಳಸ್ವ[4]ಭಾವಮಂ[4] ಮನೆಯತ್ತಲ್ ॥
ಸಾರ್ಚು ಹಿತರಪ್ಪರಂ ಸಲೆ
ಪೆರ್ಚಿಸು ತಳವರ್ಗಮಂ ಮನಂಗೊಳೆ ಮಗನೇ ॥ ೩೭೮

## ಸೂತ್ರಂ ೮೪

ಕವದಿನಮರಯಿರೆನೆವೆನಿ
ಪ್ಪವು ವರ್ತಿಕುಮನ್ಯಯುಷ್ಮದಸ್ಮದ್ವಿಷಯ ।
ವ್ಯವಹೃತಿಗಳ್ಗೀಕಾನೇ
ಕವಚನದಿಂ ಪ್ರತಿವಿಭಕ್ತಿಪುರುಷಾಖ್ಯಂಗಳ್ ॥ ೩೭೯

ಪ್ರಯೋಗಂ ॥

ಪ್ರಥಮಪುರುಷಕ್ಕೆ ॥

ತೊಟ್ಟಂ ಸಂಮೋಹನಮಂ
[5]ತೊಟ್ಟನೆ[5] ಭುಜವಿಜಯಶಾಲಿ ಫಲ್ಗುಣನಾಗಳ್ ॥
ಪುಟ್ಟಿದ ನಿದ್ರಾ[6]ಭರದಿಂ[6]
ದೊಟ್ಟೈಸಿ ವಿರೋಧಿಭೂಭುಜರ್ ಮೆಯ್ಮಱೆದರ್ ॥ ೩೮೦

ಮಧ್ಯಮಪುರುಷಕ್ಕೆ ॥

ನುಡಿದಯ್ ಪೊಚ್ಚಱಿಮಾತಂ
ಬಿಡದೆನ್ನೊಳ್ ಜಱುಚುತಿರ್ಪುದಾವುದು ಗಂಡು ॥
ಕೈಗೊಡೆ ಮೊನೆಗಿದಿರ್ಚಿ ಬರವೇಳ್
ತೊಡ[7]ರ್ದಾಗಳ್[7] ಕಾಣ್ಬಿರೆಮ್ಮ ನಿಮ್ಮೊಂದಳವಂ ॥ ೩೮೧

ಉತ್ತಮಪುರುಷಕ್ಕೆ ॥

ಅಸುರಹರಂ ತೇರಂ ಸ
ಯ್ತುಸಗುವನಾಂ ಕೀೞಿ ನಿಂದು ಬಿಲ್ಗೊಳ್ವೆನೆನಲ್ ॥
ವಿಸಸನಮದಾವುದರಿದ
ಕರ್ಣಸೂನುವಂ ಕೊಂದೆವೆಂದು ನಿಶ್ಚಿಂತಮಿರಿಂ ॥ ೩೮೨

1 ನೋಡೆ (ಅ). 2 ಸಿತ (ಓ.ಮ) 3 ಮಚ್ಚರಿಸು (ಮ). 4 ಭಾವದೊಳ್ (ಓ.ಮ). 5 ನೆಟ್ಟನೆ (ಮ). 6 ಭರಮಿರ (ಓ.ಮ). 7 ದಾರ್ಗಡೆ (ಅ)

## ಸೂತ್ರಂ ೮೫

ಮಿಗದಾಸ್ವಾರ್ಥದೊಳಂತವು
ನೆಗಟ್ಟುಂ ತಂತಮ್ಮ ಸಾಧನಂಗಳೊಳನಿತುಂ ।
ಯುಗಪತ್ಪ್ರಯೋಗಮಾದಂ
ದು ಗಣನೆಯೊಳ್ ಮುಂದೆ ನಿಂದುದಾವುದದಕ್ಕುಂ ॥ ೩೮೩

ಪ್ರಯೋಗಂ ॥

ಸ್ವಾರ್ಥಕ್ಕೆ ॥

ಎಂದಿಂತಾತನನಂದು ನಂಬಿಸಿದೊಡಾ ಮತ್ಸ್ಯಾತ್ಮಜಂ ನಂಬಿ ಸಾ
ನಂದಂ ಬಂದು ಸುರೇಂದ್ರಸೂನುಗೆ ತುಟಿಲ್ಗೆಯ್ದಂದನಾನಿನ್ನೆಗಂ ॥
[1]ಬಂದಯ್ ನೀಂ ದಯೆ[1]ಯಿಂದಮಾನಱಿದೆನಿಲ್ಲೀಗಳ್ ಮನಂದಂದೆನಿ
ನ್ನೊಂದುಂ ಸಂದೆಯಮಿಲ್ಲ ತೇರನೆಸಪೆಂ ನೀಂ ಕಾದಿ ಗೆಲ್ ಫಲ್ಗುನಾ ॥ ೩೮೪

ಯುಗಪತ್ಪ್ರಯೋಗಕ್ಕೆ ॥

ಆಮುಂ ದ್ರೋಣ[2]ರು[2]ಮಶ್ವ
ತ್ಥಾಮನುಮಂಗಾಧಿರಾಜನುಂ ಕೃಪನುಂ ಸಂ ॥
ಗ್ರಾಮದೊಳಾಂಪೆವರಾತಿಯ
ನೇಮಾತಡಿಯೆತ್ತು ತಡೆಯದಿರ್ ಭುವನಪತೀ ॥ ೩೮೫

## ಸೂತ್ರಂ ೮೬

ದದಪವಕಾರಂಗಳ್ ಮೂ
ಲದೊಳಕ್ಕುಂ ಭೂತವರ್ತಮಾನಭವಿಷ್ಯ ।
ದ್ವಿದಿತವಿಭಕ್ತಿತ್ರಿತಯ
ಕ್ಕದೆಲ್ಲ ವಚನಂಗಳೊಳ್[3]ಮಿದಾಗಮ[3]ಮಕ್ಕುಂ ॥ ೩೮೬

ಪ್ರಯೋಗಂ ॥

ಭೂತವತಿಗೆ ॥

ಆಡಿದನಿಂದ್ರನಿಂದ್ರಗಣಿಕಾ[4]ಗಣ[4]ಮಟ್ಟಿಱೊಳೊಲ್ದು ಮಂಗಳಂ
ಬಾಡಿದುದಬ್ಜಜಂ ಪರಸಿ ಸೇಸೆಯನಿಕ್ಕಿದನದ್ರಿ ತಾನೆ ಮುಂ ॥
ಡಾಡಿ ವಿಭೂತಿಯಿಂದೊಸಗೆಮಾಡಿದನಂಗಜನಂಗಲಕ್ಷ್ಮಿಯೊಳ್
ಕೂಡಿದನೆಂದೊಡೇಪೊಗಟ್ಟುದೋ ಭವಶೈಲಭವಾವಿವಾಹಮಂ ॥ ೩೮೭

---

1 ಬಂಧದೊಳಂತವುಯುಂನಿಂದಯೆ (ಅ). 2 ನು (ಬ). 3 ಗಿದಾಗಮ (ಅ).
4 ಜನ (ಅ).

ವರ್ತಮಾನಕ್ಕೆ ॥

ಮಾಡಿದಪಂ ಖಳಸಮಿತಿಗೆ
ಕೇಡಂ ತಕ್ಕರನುದಾತ್ತಮಹಿಮೋನ್ನತಿಯೊಳ್ ॥
ಕೂಡಿದಪಂ ನೀಡಿಲ್ಲದೆ
ನೀಡಿದಪಂ ಬೇಡ್ಪವಂಗೆ ಬೇಡ್ಪುದನಿಂದ್ರಂ ॥ ೩೮೮

ಭವಿಷ್ಯಂತಿಗೆ ॥

ಬರ್ಷನವೋಘಮಪ್ಪ ಸಮಯಕ್ಕೆ ಪಲುಂಬದೆ ಪಾರುತಿರ್ಪುದಾಂ
ಬರ್ಪುದನೆಂದು ಪೋದನಿನಿಯಂ ಜಲದಾಳಿಗಳಿಂತಿವೀಗಳೇ ॥
ಬರ್ಪುವೆ ಬಂದನಿಲ್ಲ ತಡೆದಂ ಪರದೇಶದೊಳಾದ ಮರ್ಚಿನಿಂ
[1]ಕೂರ್ಪೊಡೆ[1] [2]ಬರ್ಪರಲ್ಲ[2]ದೊಡೆ ಬರ್ಪರೆ ಕಲ್ಲೆದೆ[3]ಯಪ್ಪ[3] ಮಾನಸರ್ ॥ ೩೮೯

## ಸೂತ್ರಂ ೮೭

ಭಾವಿಭವತ್ಕಾಲಂಗಳೊ
ಳಾವಿಹಿತವಿಭಕ್ತಿಯಾದಿಗಳೊಳಾಗಮದಿಂ ।
ತಾವೊಲ್ವರ್ ಕೆಲಬರ್ ಭಾ
ಷಾವಿದರುದ್ವಾದಿಯಕ್ಕಮದುವುಂ ಪ್ರಾಯಂ ॥ * ೩೯೦

## ಸೂತ್ರಂ ೮೮

ಅವಱೊಳಗೆ ನಪುಂಸಕಲಿಂ
ಗವಿಷಯಮಾದಲ್ಲಿ ಮೊದಲ ಪುರುಷಂ[4]ಗುದುವೆಂ ।
ಬು[4]ವೆ ದಲ್ ಸಮನಿಸುಗುಂ ಸ್ತ್ರೀ
ವಿವಕ್ಷೆಯೊಳ್ ನೆಗಱ್ಗೆ ಮೇಕವಚನಮಳಂತಂ ॥ ೩೯೧

ಪ್ರಯೋಗಂ ॥

ಊದಿದುದು ತಣ್ಣಲರ್ ಕಳ
ನಾದಂ [5]ಸಾದರ[5]ದೊಳೊಂದಿ ನೆಗಱ್ದುದು ಪದ್ಮಾ ।
ವೋದ[6]ಮಿನಿಸುಂ[6] ತೊವತೊರ್ವ
ರಾದುದು ಕೂಗಿದುವು ತಾಮ್ರಚೂಡಕುಳಂಗಳ್ ॥ ೩೯೨

---

1 ಕೂರ್ಪರೆ (ಓ.ಮ). 2 ಪರ್ಬರಲ್ಲ (ಅ.ಇ). 3 ಯಾದ (ಓ.ಮ). 4 ಗದುವೆಂದುವೆ (ಓ ಮ). 5 ಗಾಂದರ (ಓ.ಮ). 6 ಮಿಸಸಂ (ಓ.ಮ).

* ಒಂದು ಪ್ರತಿಯಲ್ಲಿ ಈ ಸೂತ್ರವೇ ಇಲ್ಲ.

ಅಱಿವಳ್ ಪಾಂಡುತನೂಜರ
ತೆಱನೆಲ್ಲಮನೀಕೆ ನುಡಿವಳಲ್ಲಳ್ ತಪ್ಪಂ ।
ಮಱಸಿ ಪುಸಿನುಡಿವ ಜಱುಚರ
ತೆಱನಂ ಕಂಡಱಿಯದಂತು ಕುಳಿಯುರುವೊಳರೇ ॥ ೩೯೩

## ಸೂತ್ರಂ ೮೯

ಅರೆಬರ್ ತದೇಕವಚನಾಂ
ತರಂ ನಪುಂಸಕದೊಳಾಗೆ ತುತ್ತ್ವನ್ಯತರಂ ।
ದೊರೆಕೊಳ್ಗುಮೆಂಬರವು ಮುಂ
ತಿರೆ [1]ಪೂರ್ದುಗುಮುಮರ್ದಿಕಾರಮಕ್ಕೆ ಯಕಾರಂ[1] ॥೨೯೪

ಪ್ರಯೋಗಂ ॥
ಮುಟ್ಟಿತು ಮುಟ್ಟದು ದಿವಮಂ
ಮೆಟ್ಟಿತು ಮೆಟ್ಟದು ರಸಾತಳಾಗ್ರಮನೆಂಬೊ ।
ಳ್ಪಿಟ್ಟಳಮಾಗಿರೆ ದಿವಿಜರ
ದಿಟ್ಟಿಗೆ ಸೊಗಯಿಸಿತು ಮುಂದೆ ಮಂದರಶ್ಯೆಲಂ ॥ ೩೯೫

ಉರಗರಗಿದರ್ ದೈತ್ಯರ್ ಬೆಳ್ಕುತ್ತರಳ್ಕಿದನಿಂದ್ರನೀ
ಶ್ವರನ ಮನವು[2]ಬ್ಕಾಡಿತ್ತೋಡಿತ್ತು[2] ಕಿನ್ನರಸ್ಯೆನ್ಯಮಾ ।
[3]ಸರಲ ಬರಮಂ[3] ಕಂಡಿಂ ಕೆಟ್ಟತ್ತು ಭಾರತಮೆಂದು ತಾ
ವರೆಯೆಲೆಯ ನೀರಂತಾಯ್ತುತ್ತಂ ಸುರಾಸುರಮಂಡಲಂ ॥ ೩೯೬

## ಸೂತ್ರಂ ೯೦

ಅವಿಶಿಷ್ಟಲಿಂಗವಚನ
ವ್ಯವಸ್ಥೆಯಿಂದೊಂದಿ ಗುಂ ಕುಮಾದೇಶಂಗಳ್ ।
ಬವರಿಸುಗುಂ ಸಂಪ್ರತಿಗಂ
ಭವಿಷ್ಯದರ್ಥದೊಳಮನ್ಯವಚನೋಕ್ತಿಗಳೊಳ್ ॥ ೩೯೭

ಮಾಱುಗುಮಲ್ಲಿ ದೇವರೆಡೆವೊಕ್ಕೊಡಮಾತ್ಮಭುಜಪ್ರತಾಪಮಂ
ತೋಱುಗುಮುರ್ಕಿ[4]ದನ್ಯ[4]ನೃಪನಂದನರಂ ತವೆ ಕೊಂದು ನಾಯ್ಗಳಂ ।
ತೀಱುಗುಮಾಗ [5]ಳಲ್ಲಿ[5] ತೊಡದರ್ರುಮನುಗ್ರಪತತ್ರಿಭಾರಮಂ
ಪೇಱುಗುಮಂತುಮಾಂತೊಡವರಂ ಬಡಿಯೊಳ್ ಪುಡಿಗುಟ್ಟಿ ತೂಱುಗುಂ ॥ ೩೯೮

1 ಪೊರ್ದುಗೆಯುಮರ್ದಕಾರಮಕ್ಕುಮಿಕಾರಂ (ಅ). 2 ಳ್ಕಾಡಿತ್ತೊತ್ತಿತ್ತು (ಅ.ಹ). 3 ನರನಬಲಮಂ (ಓ). 4 ದಂದು (ಅ). 5 ಮಲ್ಲಿ (ಅ).

ಅರ್ಕೇಂದುಗಳಂ ತವೆ ನುಂ
ಗಿರ್ಕುಂ ಕಟ್ಟಲೆ ಸಿಡಿಲ್ಗಳೆಱಗುಗುಮಂತುಂ ।
ಬರ್ಕುಂ ನಿನ್ನೊಪ್ಪಳ್ ಭಯ
ಮಿರ್ಕುಮೆ ನೀನಿರ್ಪ ಮನದೊಳುಗ್ರ[1]ತುಳಾಕರ್ಾ[1] ॥ ೩೯೯

## ಸೂತ್ರಂ ೯೧

ಉಗೆಕೆವಿಕಲ್ಪಿತಮನ್ಯಾ
ರ್ಥಗತಿಯೊಳುತ್ವೇತ್ವ[2]ಯುಕ್ತ[2]ಯುಷ್ಮತ್ಸಂಜ್ಞೋ ।
ಕ್ತಿಗ[3]ಳೊಳಮ[3]ಸ್ಮದ್ಬಹುವಚ
ನಗತಿಯೊಳಂ ನೆಗೞ್ದ ಸರ್ವಸಾಧನಿಗಕ್ಕುಂ ॥ ೪೦೦

ಪ್ರಯೋಗಂ ॥

ಅನ್ಯಾರ್ಥಗತಿಗೆ ॥

ಮೇದಿನಿ ಸಾಗರಾಂತಮದು ನಿನ್ನನೆ ಪತ್ತುಗೆ ನಿನ್ನ ವಕ್ಷದೊಳ್
ಶ್ರೀ ದೊರೆಕೊಂಡು ಪೆರ್ಚುವೆರಸಿರ್ಕೆ ಸಮಂತು ನವಗ್ರಹಂಗಳೇ ।
ಕಾದಶಮಕ್ಕೆ ಕೀರ್ತಿ ಪರೆದಿರ್ಕೆ ಜಯಾಂಗನೆ ಕೂರ್ಕೆ ನಿಚ್ಚಲುಂ
ವೇದದೊಳೋದಿದಾಯು ನಿನಗಕ್ಕೆ ಚಿರಂ ಕಲಿಕಾಲಸೂದನಾ ॥ ೪೦೧

ಯುಷ್ಮತ್ಸಂಜ್ಞೋಕ್ತಿಗೆ ॥

ವಾಯಸದಂತೆ ನೋಡು ಬಕದಂತಿರೆ ಮೆಲ್ಲನೆ ಮೆಟ್ಟು ಕಚ್ಛಪೋ
ಪಾಯದಡಂಗಿ ನಿಲ್ ಭ್ರಮರಿಯೊಳ್ ಭ್ರಮಿಯಂತಿರೆ ಬೆಚ್ಚರಾಗು ಖ ।
ಡ್ಗಾಯುಧ[4]ಚಾಮರಂ[4] ಪೊಳೆವ ಮಿಂಚನೆ ಪೋಲ್ತಿರೆ ಬೀಸು ನೀಂ ಖಳ
[5]ನ್ಯಾಯದಿ[5]ನೆಲ್ಲಮಂ ನೆಱೆಯೆ ಕಲ್ತುಪದೇಶಕನಾಗು ಲೋಕದೊಳ್ ॥ ೪೦೨

ಕಂ॥ ಹರಿ ನುಡಿಯೆ ನುಡಿಯಿ[6]ಮುಲಿ[6]ಯುಲಿ
ಮಿರಿಮುಸಿರ[7]ಲಿಮತ್ತ[7]ಸಾರಿಮೆಲೆಮಿಡುಕದಿರಿಂ ।
ಪಿರಿದುಂ [8]ಗೞಪಲಿಮೆಡೆ[ಗೋ
ದಿ]ರದಿರಿ[8]ಮೆನುತಿರೆ ಕಡಂಗಿ ಪಡಿಯಱಿರೆತ್ತಂ ॥ ೪೦೩

ಅಸ್ಮದ್ಬಹುವಚನಗತಿಗೆ ॥

ನೆನೆಯದೆ ಕಜ್ಜದ [9]ಬಿಣ್ಪಂ[9]
ಮುನಿವಯ್ ನೀನೊರ್ವನೆಂಬ ಹರಿಗಮಸಾಧ್ಯಂ ।

---

1 ತಳಕರ್ಾ (ಓ.ಮ). 2 ಯುಕ್ತ (ಓ.ಮ). 3 ಳಿಂದ (ಓ.ಮ). 4 ಚಾಪಮಂ (ಓ.ಮ). 5 ನ್ಯಾಯಮ (ಓ.ಮ). 6 ಮಾಲಿ (ಓ.ಮ). 7 ಲಮಿತ್ತ (ಓ.ಮ). 8 ಗಳಪರಿಮೆಡೆಗೋದಿರದಿರಿ (ಅ) ; ಗೞಪಲಿಮೆಡೆಗೊಂಡಿರದಿರಿ (ಅ.ಇ). 9 ಬಿಣ್ಪಿ (ಓ.ಮ).

ಮನುಜಪ್ರಾಕಾರಾಂ[1]ಕನೊ[1]
ಳಿನಿಬರುಮೊಂದಾಗಿ ತಾಗುವಂ ಫಲ್ಗುಣನೊಳ್ ‖ ೪೦೪

## ಸೂತ್ರಂ ೯೨

ತದುಪಗತಮಧ್ಯಮೈಕ
ತ್ವದೊಳಕ್ಕು ಪ್ರಾಯದಿಂದಿಕಾರಮುಕಾರಂ ।
ವಿದಿತಸ್ವರೂಪಲೋಪಮು
ಮದಂತೆ ಪೆಱವುಳಿಯೊಳಂ ಪ್ರಕೃತ್ಯಂ[2]ತದೊಳಂ[2] ‖ ೪೦೫

ಪ್ರಯೋಗಂ ‖

ಬಿಗಿ ಪುಗು ಬಿಟ್ಟು ಕೂಡು ಜಡಿ ಬಗ್ಗಿಸು ಪೊಯ್ವೆಲೆನೋಡು ಸಾಯೆ ಸಾ
ರ್ದುಗಿ ಕೊಳೆ ನೂಂಕು ಸಾರ್ಚು [3]ಕಡೆ[3]ದೋಱೊಡಸಂದಿಸು ಸಾರ್ದು
[4]ದಂಡೆ[4]ಗೊಳ್ ।
ಪುಗದೆಡೆಮಾಡು ಚಪ್ಪರಿಸು ರೂಪಿಡು[5]ಕೂಪಿಡು[5] [6]ಕೂರ್ಪು[6]ದೋಱು ಪಾ
ಱಗಿಯದೆ ಕೂರ್ಮೆಯಿಕ್ಕು [7]ತೆಗೆ[7] ತೊಂಗಲನಿಂಬೆನೆ ನೂಂಕು [8]ಯುದ್ಧಮಂ[8]‖

## ಸೂತ್ರಂ ೯೩

ಕ್ರಿಯೆ ತಾಂ ಕ್ರಿಯಾರ್ಥಮಪ್ಪ
ಲ್ಲಿಯಲಕ್ಕುಂ ವರ್ತಮಾನಗತಿಗುತ್ತುಮುತುಂ ।
ದ್ವಯಮಕ್ಕುಂ ಪೂರ್ವಭವ
ಕ್ರಿಯೆಯೊಳಿದುತ್ಪ್ರತ್ಯಯಂಗಳಕ್ಕುಂ ಪೀನಂ ‖ ೪೦೬

ಪ್ರಯೋಗಂ ‖

ತಿಂಗಳನಪ್ಪಿಕೊಳಲ್ [9]ಪಾ[9]
ಱಿಂಗಂ [10]ಬೆಳೆಯಿಕ್ಕ[10]ಲಮರಗಿರಿಶಿಖರಕ್ಕಂ ।
ಲಂಗಿಸಲೊಡರಿಸುವರ್ ಪ
ರ್ವಂಗಳ್ ಪತ್ತೆಂಟು ದೆವಸಮೆನೆ ಬೆಲೆವೆಣ್ಗಳ್ ‖ ೪೦೭

ಕೆದಱುತ್ತುಂ ಮಣಲಂ ತೆಮಳ್ದಿ ಕೊಳುತುಂ ಘೂರ್ಣೇಣುವಂ ಸೂಸುತುಂ
ನದನದ್ಯಚ್ಛಜಲಂಗಳಂ ಮುಱಿಯುತುಂ ಭೂಜಂಗಳಂ ನುರ್ಗುತುಂ ।

---

1 ತನೊ (ಅ). 2 ತರದೊಳ್ (ಅ). 3 ಕಡಿ (ಓ). 4 ಡಂಗೆ (ಓ).
5 ಕಾಪಿಡು (ಓ). 6 ನೋರ್ಪು (ಓ). 7 ನೆಗೆ (ಓ). 8 ಬಿರ್ದನಂ (ಓ).
9 ಹಾ (ಓ). 10 ಬೇವಿಕ್ಕ (ಅ).

ಪೊದಱಿಂ ಸೀೞುತುಮೆಯ್ದ ವಂಶವನಮಂ ಕಾಡಾನೆಯಂ ಪೋಲ್ತು ಪೊ
ಕ್ಕುದು ಬೀಡಂ ಲಯಕಾಲಕಾಲ[1] ವಿಚಲ[1]ದ್ಭೀಮಾರುತಂ ಮಾರುತಂ ‖ ೪೦೯

ನಡುಗಿ ತಡ[2]ವರಿಸಿ[2] ಬೆಂಕೆಯ
ಕಡುಗಾಯ್ಪಿಂಗಗಿದು ಜೆಡೆಗಳಿಡುವಿನೊಳಹಿಗಳ್ ।
ತೊಡರ್ದು ನುಸುಳ್ದೋಡಿ ಗಂಗೆಯ
ಮಡುಗಳನಡಹಡಿಸಿ ಪುಗುವಿನಂ ಭಯವಶದಿಂ ‖ ೪೧೦

## ಸೂತ್ರಂ ೯೪

ಪ್ರತಿಷೇಧದೊಳಂ ಕೆಲಬರ
ಮತದಿಂದಲ್ ವರ್ತಿಕುಂ ಪದಾಂತರದಿಂ ಸಂ ।
ಗತಿಯಾ[3]ಗಲ್ಲೋಪಂ[3] ಮೇಣ್
ಚತುರ್ಥಿ ಸಮಸಲ್ಗುಮೆಂಬರದಱೊಳ್ ಕೆಲಬರ್ ‖ ೪೧೧

ಪ್ರಯೋಗಂ ‖

ನಗೆಯೊಳಮಪ್ಪೊಡಮಿಂತೀ
ತೆಗಟ ದುರುಕ್ತಿಗಳನೆಮ್ಮೊಳಿಂ ನುಡಿಯಲ್ ನೀಂ ।
ಬಗೆಯೊಳ್ ಬೇಱೊಂದನಣಂ
ಬಗೆಯಲ್ ಗಡ ನಿನಗೆ ಸುಮತಿ ಬೇಱಾಂ ಬೇಱೇ ‖ ೪೧೨

ಅಪರಾರ್ಥಕ್ಕೆ ‖

ತರವೇಟ್ ಮದವಾರಣಮಂ
ಬರವೇಟ್ ಸನ್ನದ್ಧವಾಜಿಸಾಧನಮಂ ಬಿ ।
[4] ತ್ತರಿಸಲ್ಕೆ[4]ವೇಟ್ ವರೂಥೋ
ತ್ಕರಮಂ ಬಲಿದೊಡ್ಡವೇಟ್ ಪದಾತಿಯನೀಗಳ್ ‖ ೪೧೩

## ಸೂತ್ರಂ ೯೫

ಎಸೆಗುಂ ಭಾವದೊ[5]ಳಮರ್ದೇ
ಕಸಂಜ್ಞ[5]ವಚನಂ ಕ್ರಿಯಾಸಮಭಿಹಾರಂ ವ ।
ರ್ತಿಸುತಿರೆ ತಾನಕ್ಕುಂ ಸ
ರ್ವಸಾಧನೀಮಧ್ಯಮೈಕವಚನಮದೆಂದುಂ ‖ ೪೧೪

---

1 ವಿಲಸ (ಓ.ಮ). 2 ದಡಿಸಿ (ಓ.ಮ).. 3 ಗೆಲ್ಲೋಪಮಂ, ಗಲುಲೋಪಂ (ಓ.ಮ). 4 ತ್ತರಿಸಿಬರ (ಓ). 5 ಳವಱೇಕ ಸಂಖ್ಯೆ (ಓ.ಮ).

ಪ್ರಯೋಗಂ ॥

ಭಾವಾರ್ಥಕ್ಕೆ ॥

ಸಿಡಿಲಂ ಪೊಸವುದು ಶೇಷನ
ಪೆಡೆಯೊಳ್ ಪಟ್ಟಿರ್ಪುದೆಂಟುಮಾನೆಯ ಕೋಡಂ ।
ಪಿಡಿದೊತ್ತಿ ಕೀಱುವುದೇಱುಂ
ಕಡಲೊಳಗೋಲಾಡುತಿರ್ಪುದವನ ವಿನೋದಂ ॥ ೪೧೫

ಕ್ರಿಯಾಸಮಭಿಹಾರಕ್ಕೆ ॥

ಕೊಳ್ಕೊಳ್ಳೆಂದೊಡನೊಡನೆಯೆ
ತುಳ್ಕುವ ಯುವತಿಯರ ಕರಪರಿಚ್ಯುತಸಲಿಲಂ ।
ಗಳ್ಕೊಳೆ ಬಿಡೆ ಕೆದಱುವ ಕಿಂ
ಜಳ್ಕದಿನಾದುದು ಸರೋವರಂ ಕಪಿಶಜಳಂ ॥ ೪೧೬

## ಸೂತ್ರಂ ೯೬

ಧಾತುಗನೇಕಾಕ್ಷರಕಾ
ಖ್ಯಾತವಿಭಕ್ತಿಗಳಮೊದಲೊಳಿಸು ತಾನಕ್ಕುಂ ।
ಹೇತುಪ್ರಯೋಗದೊಳ್ ತ
ಜ್ಜಾತಿಯೆ ಕರ್ಣಾಟಧಾತುಗಳ್ಗ[1]ಮರ್ದಿರ್ಕುಂ[1] ॥ ೪೧೭

ಪ್ರಯೋಗಂ ॥

ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಮಳವಟ್ಟರ್ಥಋಜ್ವಾಗತಂ ಶೋಭಿಸುಗುಂ ಪಾರ್ಶ್ವಾಗತಂ ನೋೞ್ಪರನೆಱಗಿಸುಗುಂ ಸಾಚಿ ತದ್ವಿದ್ವರಂ ರಂಜಿಸುಗುಂ[2]ದ್ವ್ಯರ್ಧಾ[ಕ್ಷಮೆಂ][2]ಬಂತೆಪೊಲಿರೆ[3]ನೆಗಟ್ದಿರ್ದಂ[3]ಗನಾಭಂಗಿಯಂ ಚಿತ್ರಿಸಿ ಚಿತ್ರಕ್ಕಾಯುಪೊಯ್ದಂ ಮದನನೆನೆ ಕರಂ ಕಾಂತೆ ಕಣ್ಗೊಪ್ಪಿ ತೋರ್ಕುಂ॥

ಇಲ್ಲಿ ಉಪಾಂತ್ಯಕ್ಕೆ ಲಘ್ವೇಕಾಕ್ಷರಕ್ಕಿದಂತ ಪ್ರಯೋಗಂ ॥

ಸುರರೊಸೆಯೆ [4]ಸಕಳ . . . ಮು[4]
ಸುರನಿಕರಮತರ್ಕ್ಯಮಪ್ಪ ವಿಕ್ರಮಗುಣಮಂ ।
ಧರಿಯಿಸಿ ಸಂದಿರ್ದಂ ಭಾ
ಸುರತೇಜನುದಾತ್ತಕೀರ್ತಿನಿಳಯಂ ಕೃಷ್ಣಂ ॥ ೪೧೮

ಪ್ರಕೃತಿಗಳಂ ಧಾತ್ವರ್ಥದ
ವಿಕಲ್ಪದಿಂದಱಿದು ಸಮಱಿಕೊಳ್ವುದು ಬಹುರೂ ।

---

1 ಮವಕ್ಕುಂ (ಅ.ಮ). 2 ದ್ಯಶ್ವಕ್ಷಮೆಂ, (ಮ), ಪ್ಯರ್ಥಾಕ್ಷಮೆಂ (ಅ), ದ್ವ್ಯರ್ಧಾಕ್ಷಿಯೆಂ (ಅ.ಇ). 3 ಬರೆದಿರ್ದಂ (ಅ). 4 ಕಳಸಿಯೇಳು ಕಳಮು (ಅ).

ಪಕಮ[1]ನದಂ ಪೇೞಲ್ಕಾ[1]
ಸಕಳಂ ವಾಕ್ಪ್ರತಿಯುಮಾಱನುಟಿದವರಳವೇ ॥ ೪೨೦

ಪ್ರತಿಬುದ್ಧರಂ ಕುಱಿತ್ತೀ
ಸ್ಥಿತಿಯಿಂದಂ ಕಿಱಿದು ಮಾರ್ಗಸೂಚನೆಗೆಯ್ದಿಂ ।
ಮತಿವಂತರಱಿದು ಪೇೞ್ವುದು
ವಿತರ್ಕದಿಂ ಮತ್ತಮುಕ್ತಶೇಷಮನಿದಱೊಳ್ ॥ ೪೨೧

ಇದು ಶಬ್ದಸ್ಮೃತಿಯೊಳ್ ಆಖ್ಯಾತಪ್ರಕರಣಂ ಪಂಚಮಂ.

---

ಗೀತಿಕೆ ॥
ಇಂತಿರೆ ಶಬ್ದಂ ಸಂದೇಹ
ಧ್ವಾಂತೌಘಂ ಪಿಂಗಿರೆ ಜಲಕನಾಗೆ ಬುಧ ।
ಸಂತತಿಗಪ್ಪಂತು ಪೇೞ್ದನಿದಂ
ಶಾಂತಮನಂ ಕವಿತಾಗುಣೋದಯಂ ॥ ೪೨೨

ಅಭಿಮತಶಬ್ದಸಂಸ್ಕರಣದಿಂ ಜನಮಂ ತಿಳಿವಂತು ಮಾಡಿ ವಾ
ಗ್ವಿಭವಮದಪ್ರತರ್ಕ್ಯಮೆನೆ ಸಂದೆಸಕಂ ದೆಸೆಯಂತನೆಯ್ದಿ ತ ।
ತ್ಸಭೆಗಳೊಳಗ್ರಪೂಜೆವಡೆದೊಂದು ಮಹಾಮಹಿಮಾನುಭಾವದಿಂ
ದಭಿನವಶರ್ವವರ್ಮನಿವನೆಂದಪುದುರ್ವರೆ ನಾಗವರ್ಮನಂ ॥ ೪೨೩

[2] ಇದು ಸಕಳಸುಕವಿಜನಮನಸ್ಸರೋಜಿನೀರಾಜಹಂಸಾಯಮಾ
ನಾನೂನಕವಿತಾಗುಣೋದಯಂ[2] ಶ್ರೀನಾಗವರ್ಮ
ಪ್ರಣೀತಮಪ್ಪ ಕಾವ್ಯಾವಲೋಕನದೊಳ್
ಶಬ್ದಸ್ಮೃತಿ[3]ಯೆಂಬುದು
ಪ್ರಥಮಾಧಿಕರಣಂ[3]

---

1 ನವಕೆಂಬಿಸಲ್ಕಾ (ಅ). 2 ಇದು (ಓ.ಮ), ಪ್ರತಿಗಳಲ್ಲಿ ಇಲ್ಲ. 3 ಯೊಳ್ಪ್ರಥ
ಮಾಧಿಕಾರಂ (ಓ.ಮ).

# ಕಾವ್ಯಮಲವ್ಯಾವೃತ್ತ್ಯಧಿಕರಣಂ

---

## ಪದಪದಾರ್ಥ ಸಂಧಿದೋಷವಿನಿಶ್ಚಯ ಪ್ರಕರಣಂ

ಪ್ರತಿ[1]ಭಾನಂ[1] ಕಾವ್ಯವಿದ್ಯಾಪ್ರಚಯಪರಿಚಯಂ ವೃದ್ಧಸೇವಾನುರಾಗಂ
ಸತತಾಭ್ಯಾಸಪ್ರಯತ್ನಂ ಕವಿತೆಗೆ ನಿಯತಂ ಕಾರಣಂ ಪೇೞ್ವೊಡಂತಾ ।
ಪ್ರತಿ[2]ಭಾನಂ[2] ಶಕ್ತಿ ಲೋಕಾಗಮಸಕಲಕಲಾವೇದನಂ ವಿದ್ಯೆ ಶಾಸ್ತ್ರಾ
ನ್ವಿತನಪ್ಪಂ ವೃದ್ಧನಾಲಸ್ಯಮನುಟಿದೆಸಪುದ್ಯೋಗಮಭ್ಯಾಸಕರ್ಮಂ ॥

ಶ್ರುತವಾರಿನಿಧಿಯ ಪಾರಮ
ನತಿಪ್ರಬಂ[3]ಧಾಭಿಯೋಗ[3]ರಾರೆಯ್ದಿದೊಡಂ ।
ಕೃತಪುಣ್ಯಂಗಲ್ಲದೆ ವಿ
ಶ್ರುತಕವಿತಾರತ್ನಮಲ್ಲಿ ಸಂಭವಿಸುಗುಮೇ ॥ ೪೨೫

ಮದಮಿಲ್ಲದಿಭಂ ಮಧುವಿ
ಲ್ಲದ ಕುಸುಮಂ ಚಂದ್ರ[4]ನಿಲ್ಲದಿರುಳಾಳಾರ್ಪಿ[4] ।
ಲ್ಲದ ನೃಪತಿ ಕವಿತೆಯಿಲ್ಲದ
ವಿದಗ್ಧತಾಗುಣಮದೇಂ ಮನಂಗೊಳಿಸುಗುಮೇ ॥ ೪೨೬

[5]ಪರಮ[5]ಪ್ರೀತಿನಿಮಿತ್ತಂ
ನಿರತಿಶಯಯಶೋ[6]ನಿದಾನ[6]ಮಪ್ಪುದಱನಿಹಂ ।
ಪರಮೆಂಬೆರಡರ್ಕಂ ಬಂ
ಧುರ[7]ಕಾವ್ಯ[7]ನಿಬಂಧದಿಂ ಹಿತಂ ಪೆಱತುಂಟೇ ॥ ೪೨೭

ಕೃತಿಸತಿಯ ಮೆಯ್ಯೊಳೆಳ್ಳನಿ
ತು ತಾನದೊಂದಱಿಯೆ ದೋಷಮಾಗೆ ತದಾವ ।
ರ್ಜಿತಮಪ್ಪ ಕೀರ್ತಿಯುಂ ನಿಂ
ದಿತಮಕ್ಕುಂ ದರ್ಪಣಾರ್ಪಿತಚ್ಛಾಯೆಯವೊಲ್ ॥ ೪೨೮

---

1-2 ಭಾವಂ (ಓ.ಮ). 3 ಧಾನುರಾಗ (ಅ.ಮ). 4 ನಿಲ್ಲದೊಂದಿರುಳಾರ್ಪಿ (ಅ.ಮ). 5 ಪರಱ (ಮ). 6 ವಿಧಾನ (ಮ). 7 ವಾಕ್ಯ (ಅ.ಮ).

ಅದಱಿಂದುಪೇಕ್ಷೆಗೆಯ್ಯದೆ
ಸದಭಿಮತೋದಾತ್ತಕೀರ್ತಿಯಂ ಬಯಸುವವಂ ।
ಪದವಾಕ್ಯಾರ್ಥಂಗಳೊ[1]ಳೊಂ
ದದಂತು[1] ಪಿಂಗಿಸುಗೆ ದೋಷಮಂ [2]ಕೃತಿಯಿಂದಂ[2] ॥ ೪೨೯

[3]ಪ್ರಯೋಜನ[3]ಸ್ಥಾಪನಂ

## ಸೂತ್ರಂ ೯೭

ಇರೆ ಶಬ್ದಾರ್ಥಂಗಳ್ ತ
ತ್ಪರತೆಯಿನದುಕಾವ್ಯಮದಱೊಳುಚಿತ್ತೈಕಾರ್ಥಾಂ ।
ತರವಾಚಿ ಶಬ್ದ[4]ಮವ[4]ಭಾ
ಸರೂಪಮಾಹ್ಲಾದಕಾರಿಯಪ್ಪುದದರ್ಥಂ ॥ ೪೩೦

## ಸೂತ್ರಂ ೯೮

ಪ್ರಕರಣದಿಂ ಶಬ್ದಾಂತರ
ದ ಕೂಟದಿಂದಭಿನಯಂಗಳಿಂದಿಷ್ಟಾರ್ಥ ।
ಪ್ರಕಟನಮಕ್ಕುಮನೇಕ
ಪ್ರಕಾರಮರ್ಥಂ ಪದಕ್ಕೆ ಸಂಭವಿಸುವೊಡಂ ॥ ೪೩೧

ಪ್ರಕರಣಕ್ಕೆ ॥

ಏನೇನುಂ ಮದನುಜರೆನ
ಗಾನತರಣಮಾಗದಿರ್ದರುಂಮದಮವರ್ಗಂ ।
ತೇನೇತಱೊಳಾಯ್ತದನಿನಿ
ಸಾನುಂ ಬೇಗದೊಳೆ ಕಳೆದು ತೋಱುವೆನೆ ರಣದೊಳ್ ॥ ೪೩೨

ಶಬ್ದಾಂತರ ಸಂಸರ್ಗಕ್ಕೆ ॥

ಹರಿ ಪೊಯ್ಯೆ ಬಿರಿದ ಮದವ
ತ್ಕರಿಕುಂಭದಿನಗದೊಳೊಕ್ಕ ರಕ್ತಾರಕ್ತ ।
ಸ್ಫುರಿತನವಮೌಕ್ತಿಕಂಗಳ
ನರೆ[5]ಉಳಿ[5] ವನಚರಿಯರೆರದ ಪಣ್ಗೆತ್ತಾಯ್ದರ್ ॥ ೪೩೩

1 ಳ್ಪೊಂದದಂತು (ಮ). 2 ಕ್ರಮದಿಂಧಂ (ಒ.ಮ.ಅ). 3 ಪ್ರಯೋಗ (ಅ).
4 ಮದ (ಅ). 5 ಉಗಿ (ಮ).

ಅಭಿನಯಕ್ಕೆ ॥

ಇನಿವಿರಿಯವಪ್ಪ ಪೊಲೆಯವ
ಳಿನಿವಿರಿಯವೆನಿಪ್ಪ ಕಣ್ಗಳಾಕೆ ಮನಂಗೆ ।
ಟ್ಟಿನಿತು ದೆವಸಂಗಳಂ ತ
ನ್ನಿನಿಯನನಗಲ್ದಿಂ ಬಟಿಕ್ಕಮಿಂತಿಂತಾದಳ್ ॥ ೪೩೪

## ಸೂತ್ರಂ ೯೯

ಅಸಮರ್ಥಮಪ್ರತೀತಂ
ವಿಸಂಧಿ ವಿಪರೀತಕಲ್ಪನಂ ಕಷ್ಟಂ ನೀ ।
ರಸಮೆಂದು ದೋಷಮಿವು ಸಮ
ನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ ॥ ೪೩೫

## ಸೂತ್ರಂ ೧೦೦

ತೆಱೆದಿರೆ ತದ್ವಾಚಕತೆಯ
ನಱಿಪಲ್ ನೆಱೆಯದುದೆ ಕೃತಿಯೊಳಸಮರ್ಥಪದಂ ।
ಪೆಱತೇಂ ಪ್ರತೀತಿ ಬಗೆಗೇ
ತಱೊಳಂ ತೋಱದುದದಪ್ರತೀತಂ ಗೂಢಂ ॥ ೪೩೬

ಉದಾಹರಣೆ ॥

ಅಸಮರ್ಥಕ್ಕೆ ॥

ಉರ[1]ಗಾಳಿ[1] ನಂದನಾವಳಿ
ತರತರದಿಂದೆಱಗಿ ಜಳಭೃದಂತಿಕದೊಳ್ ಮಾ ।
ಣ್ದಿರದೆ ಕುಡಿ[2]ದುಪ್ಪು[2]ನೀರಂ
ಧರೆಗಿನಿದಂ ಕಱೆವುದಿಂ[3]ತಿದೇಂ[3] ವಿಸ್ಮಯವೋ ॥ ೪೩೭

ಅಪ್ರತೀತಕ್ಕೆ ॥

ಅಸಿ[4]ತರ್ಧಿ[4] ವಯಸ್ಯಾಧ್ವದೊ
ಳೆಸೆವ ನವಾಬ್ಜನ್ಮಶೋಭೆ ಮೇಚಕದೂಷ್ಯ ।
ಪ್ರಸರದ ಮೆಯ್ಯೊಳ್ [5]ಪರ್ವಿ[5]ರೆ
ಪಸರಿಸಿದ ಗುಣಂಗ[6]ಳವನನೇ[6]ನಿಟಿಸಿದು[7]ಪ್ಪೋ[7] ॥ ೪೩೮

---

1 ಗಾದಿ (ಅ.ಮ), ಗಾಡಿ (ಅ). 2 ದಿರ್ಪ (ಮ). 3 ತದೇಂ (ಮ).
4 ತರ್ತ್ರಿ (ಅ). 5 ಪರ್ಚಂ (ಅ). 6 ಳಳವನೇ. 7 ದೋ (ಓ.ಮ).

## ಸೂತ್ರಂ ೧೦೧

[1]ಅವಿಹಿತ[1]ಸಂಹಿತೆ ಮೇಣ್ ಸಂ
ಧಿವಿರೂಪಂ ಬಗೆಯೆ ತಾಂ ವಿಸಂಧಿಯೆನಿಕ್ಕುಂ ।
ಸ್ವವಿ[2]ಕಲ್ಪಿತ[2]ದೊಳನಿಷ್ಟಾ
ರ್ಥವಾಗೆ ವಿಪರೀತಕಲ್ಪನಂ ತಾನಕ್ಕುಂ ॥ ೪೩೯

ಉದಾಹರಣೆ ॥
ವಿಸಂಧಿಗೆ ॥

ಅಸಿಯು ಒಱೆ ಬೆಸದ [3]ಪಟ್ಟಿಗೆ[3]
ಮಿಸುಗುವ ಆರಂ ತೊಳಪ್ಪ ಕನ್ನಪುರಂ ಜೆ ।
ಲ್ವೆಸೆದಿರೆ ಬಲವರ್ಪ ವಿಟರ್
ಕುಸುಮೇಷುವ ಮೇಳದವರ್ಗಳೆನಿಸಿದ[4]ರದಱೊಳ್[4] ॥ ೪೪೦

ವಿರೂಪಸಂಧಿಗೆ ॥

[5]ಪಸರಂಗುಡದೆಸಪ ಮಳೀ
ಮಸರ್ಗೆಂ[5]ದುದಿತೋಡುರಾಜನಂ ನಯದಿಂ ಕ ।
ಲ್ಪಿಸಿ ಜಲಧಿ ನುಡಿವ ಮಾಣ್ಕೆಯಿ
ನೆಸೆದತ್ತುಲ್ಲೋಲಬಹಲಕಲ್ಲೋಲರವಂ ॥ ೪೪೧

ವಿಪರೀತಕಲ್ಪನಕ್ಕೆ ॥

ಬಳವದರಿಭೂಪದಾವಾ
ನಳಂ ಕಳಿಂಗಾಧಿರಾಜ ನಿನ್ನುಗ್ರಶರಾ ।
ವಳಿವಿಳಸಿತೋರುಧಾರಾ
ಜಳ[6]ಸಿತಕರನಿಂ[6]ದಮೆಯ್ದೆ ಮುಟ್ಟುಗೆ [7]ಧುರ[7]ದೊಳ್ ॥ ೪೪೨

## ಸೂತ್ರಂ ೧೦೨

ಶ್ರುತಿವಿರಸಪದಕ್ಷೇಪ
ಸ್ಥಿತಿ ಕಷ್ಟಂ ಗ್ರಾಮ್ಯಶಬ್ದಸಂದರ್ಭಸಮ ।
ನ್ವಿತಮುಮಸಭ್ಯಾರ್ಥಕೃತಿ
ಸ್ಮೃತಿಯುಂ ನೀರಸಮೆನಿಪ್ಪುದಕ್ಕುಂ ದೋಷಂ ॥ ೪೪೩

---

1 ಅವಿದಿತ (ಅ). 2 ಕಲ್ಪನ (ಅ). 3 ಪೆಟ್ಟಿಗೆ, ಕಟ್ಟಿಗೆ (ಅ). 4 ರವರೊಳ್ (ಅ). 5 ಪಸುರಂಬಡದೆಸಪಮಳೀಮಸರ್ಗೆಂ (ಅ.ಇ). 6 ಸೀಕರದಿಂ (ಓ.ಮ). 7 ಧರೆ (ಓ.ಮ).

ಉದಾಹರಣೆ ॥

ಕಷ್ಟಕ್ಕೆ ॥

ಇದಿರ್ವರ್ಪರ್ಪವೊಲಾಯ್ತು ಪವನ
[1]ವಿದಳತ್ತ್ವಾರ್ದ್ವಿಪ್ರೋಥ[1]ಪುಷ್ಪರಜಸ್ಸ ।
ಕ್ತದಿನೊದವಿ ಮಾರುತಂ ಭ್ರಾ
ಮ್ಯದತ್ಯುದಗ್ರಾಳಿಝುಂಕೃತೋಚ್ಚೈರ್ಧ್ವಾನಂ ॥ ೪೪೪

ನೀರಸಕ್ಕೆ ॥

ಅಂಗನೆಯೊಳ್ ಕಳ್ದಿರ್ಪುದ
ನಂಗಾಹಿಯನಱಿದು [2]ಪೇೞ್ದು ಪೊಡೆಯಂ ಕಡುಪಿ[2] ।
ನ್ನಂಗಂ ದೊರೆಕೊಂಡಿರೆ ಕೊಂ
ಡಂ ಗಡವೆಲೆ [3]ತ್ಯೈಗ ಹುಯಿಲ[3]ದೇಂ ಚೋಜಿಗವೋ ॥ ೪೪೫

ತಲೆಮಟ್ಟು [4]ಪಾಯ್ದು[4] [5]ವೀರ್ಯಾ
ವ[5]ಲೇಪದಿಂದಿಱಿದು ಬಿೞ್ದುಮೆೞ್ದಂ ಮತ್ತಂ ।
ಚಲ[6]ಚಲದಿಂ[6]ದೊಡನಿಕ್ಕಿದ
ನೊಲೆದಿದಿರೊಳೆ ಮಣಿಯದಾಂತ ಪರವಾಹಿನಿಯಂ ॥ ೪೪೬

## ಸೂತ್ರಂ ೧೦೩

ಮಱಿಸುಂದು ಸೂಟಸುಂದೆನೆ
[7]ಪಿಱಿತಿನಿಯೆನೆ ಪೂಱಿಯೆನೆ[7] ಪದಾಂತರದಿಂದಂ ॥
ನೆಱೆದು ನಿಲೆ ದುಷ್ಪ್ರತೀತಿಯ
ನಱಿಪುವ ಪೆಱಪೆಱವುಮಿನ್ನವೇ ಗ್ರಾಮ್ಯಂಗಳ್ ॥ ೪೪೭

ಅದೆಂತೆನೆ ॥

ನೆಱಿಗೊಂಡು ತೊನೆವ ಸರಲಿಂ
ನೆಱಲ್ದು ರಥದೊಳಗೆ ಬಿೞ್ದು ಚಕ್ರಧರಂ ಮೆ ॥
ಯ್ಮಱೆದು ಗುಹಾಂತರದೊಳ್ ಮಿಗೆ
ಮಱಿಸುಂದಿದ ಪುಲಿಯನಾಗಳಿನಿಸಂ ಪೋಲ್ತಂ ॥ ೪೪೮

ಮಚ್ಚರದ ಸೂಟ[8]ಸುಂದಿನ[8]
ಪೊಚ್ಚಱಿ[9]ನಾಂತಿರ್ದು[9] ಬಿರುದಿನೆಸಕದ ಪೆಱವುಂ ।

1 ವಿದಳತ್ತ್ವಾರ್ದ್ವಿಪ್ರೋದ (ಅ), ದೆಳದತ್ತ್ರದ್ವಾರ್ದ್ವಿಪ್ರೋದ (ಮ). 2 ಪೊದರ್ದು ಪೊಡೆಯುಂಕಾಱಿಪಿ (ಅ). 3 ತ್ಯೈಗುಹುಃಯದೇಂ (ಅ), ತ್ಯೈಗಹುಲಲದೇಂ (ಅ.ಇ). 4 ಪೊಯ್ದು (ಅ). 5 ನಿರ್ಯಾನಲೆಪ್ಪದಿಂ (ಓ.ಮ). 6 ಚಲನಿಂ (ಅ). 7 ಪೆಱಿತಿನಿ ಸಿಂಪಿಱಿಯದೆನೆ (ಓ.ಮ). 8 ಸುಂದಿದ (ಅ). 9 ನಾಂತಿರ್ದ (ಓ), ಕಾಂತಿರ್ದ (ಅ.ಮ).

[1]ಕಟ್ಟ[1]ಕಳಿಗಳ ತೊಡರ್ಪಿನ
ಮೆಚ್ಚವಣಿಗೆಯಂಕಮಮಂ ಮಹೀಶಂ ನೋಟ್ಟುಂ ॥ ೪೪೯

ಕೊೞೆವಲ್ [2]ಬತ್ತಿದ[2] ಕಾಲ್ [3]ಪಿಂ
ಬಱು[3] ಗೇಸಂ ನೆಕ್ಕ ಕದಪು ಪೊಕ್ಕಿರ್ದ ಬಸಿಱ್ ॥
ತೆಱೆದ ಮುಖಕುಹರ[4]ವರ್ಬಿಸೆ[4]
ಪಿಱುತಿನಿಗಳ ಬಳಗವೆಯ್ದೆ [5]ತಂದುದು[5] ಮುನಿಯಂ ॥ ೪೫೦

[6]ಮತ್ತ[6]ರು ಡಂಗೆಗೊಂಡು ಬಡಿಯಲ್ ಚಲದಿಂದೆನಸುಂ ದುರಾಗ್ರಹಂ
ಚಿತ್ತದೊಳಾಗೆ ನಿನ್ನ ಬಟಿಯಂ ಬರಲೀ ಮುಳಿ[7]ಸೇಂ ಟ[7]ಮಾಳದಿಂ ।
ಸುತ್ತುವರ್ಗಲ್ಲದೊಳ್ಳೆ ಬಿಡು ನೀನೆನಗಿಲ್ಲಳ ಪೂಱು [8]ತೋಱು[8] ಪೇ
ಬುತ್ತಿರಲಾಸೆಯಂ ಬಿಸುಟು ನೀಂ [6]ಕಳೆ[9] ಪಾಂಟಿ ಮತಕ್ಕೆ ಸ್ವೈರಿಸೆಂ॥ ೪೫೧
ಇಂತೀ ಪೇೞ್ವುವುಮನಱುದು ಪೆಱಪೆಱವುಮನಱುದುಕೊಳ್ವುದು ॥

ಅನುಕರಣ[10]ದೊಳೊಂ[10]ದಿದ ಮಾ
ತಿನಲ್ಲಿ ನಿರ್ದೋಷಮಾಗೆ ಸಲ್ಗುಂ ಪೇಟ್ದಿಂ ।
ತಿನಿತುಂ ಸ್ವರೂಪಕಥನದೊ
ಳನುವಾದಂ ಭಿನ್ನಶಬ್ದಮಪ್ಪುದಱಿಂದಂ ॥ ೪೫೨

ಇದು ಕಾವ್ಯಮಲವ್ಯಾವೃತ್ತಿಯೊಳ್ ಪದಪದಾರ್ಥ ಸಂಧಿದೋಷ
ವಿನಿಶ್ಚಯ ಪ್ರಕರಣಂ ಪ್ರಥಮಂ.

---

# ವಾಕ್ಯವಾಕ್ಯಾರ್ಥ ದೋಷಾನುಕೀರ್ತನ ಪ್ರಕರಣಂ

---

## ಸೂತ್ರಂ ೧೦೪

ವಿದಿತಾರ್ಥಂ ಕ್ಷೋದಕ್ಷಮ
ಮುದಾತ್ತಶಬ್ದಂ ಪರಸ್ಪರಂ ಸಾಪೇಕ್ಷಂ ।
ಪದಸಮುದಾಯಂ ವಾಕ್ಯಂ
ವ್ಯದಸ್ತಕಾಂಕ್ಷಂ ತದೇಕವಸ್ತುನಿಬದ್ಧಂ ॥ ೪೫೩

---

1 ನರ್ಚಿ (ಓ). 2 ಪತ್ತಿದ (ಅ). 0 ಸಿಂಪಿಱು (ಅ.ಮ). 4 ಮುರ್ಬಿಸೆ (ಅ). 5 ಬಂದವು (ಅ.ಮ). 6 ಪೆತ್ತ (ಅ.ಮ). 7 ಸಿಂತ (ಅ). 8 ತೋಱು (ಓ.ಮ) 9 ಕಟಿ (ಅ.ಮ). 10 ದಿನೊಂ (ಅ.ಮ).

ಲಕ್ಷ್ಯಂ ||

ಅಸವಸದಿಂ ಪಟಗೆಯ್ಯಂ
ಕಸಮಂ ಸೋದಿಸದೆ ಬಿತ್ತಿದೊಕ್ಕಲಿಗನವೋಲ್ |
ಸಸಿಯಂ ನೋಡಿ ತಳೋದರಿ
ಬಿಸುಸುಯ್ಯಂ ಬಯ್ಗೆ[1]ಮಂತೆ[1]ಮಾಡಿದ ಬಿದಿಯಂ || ೪೫೪

## ಸೂತ್ರಂ ೧೦೫

ವ್ಯವಹಿತಮೇಕಾರ್ಥಂ ವ್ಯ
ರ್ಥವಪಕ್ರಮಮಖಿಳಲೋಕಶಾಸ್ತ್ರವಿರುದ್ಧಂ |
ಸುವಿದಿತಯತಿಭಂಗಂ ಭಿ
ನ್ನವೃತ್ತಮೆಂದಿಂತು ವಾಕ್ಯದೋಷಮಿವಕ್ಕುಂ || ೪೫೫

## ಸೂತ್ರಂ ೧೦೬

ವ್ಯತಿಕೀರ್ಣಪದಕ್ರಮಮನು
ಚಿತಾನ್ವಯಂ ವ್ಯವಹಿತಾನ್ವಯಂ ತಾನದು ದಲ್ |
ಮತಿಸಮ್ಮೋಹಮನಿದಿರವ
ರ್ಗೆ ತೊಡರ್ಚಲ್ವೇಡ್ವೊಡಲ್ಲಿ[2]ಗಲ್ಲದು[2] ದೋಷಂ || ೪೫೬

ಅವರ್ಕೆ ಲಕ್ಷ್ಯಂ ||

ಒಳಕೊಳ್ ಮುಂ ನಿನಗಿಲ್ಲದ
ಮುಳಿಸಂ ಕಾಲ್ಗೆಱಗಿದೋಪನಂ ತೊಱೆ ದಯೆಯಿಂ |
ತಳ[3]ಮಳಗು[3]ತ್ತನುನಯದಿಂ
ತಿಳಿಪಲ್ಕೆಂದೆಱಗದನ್ನಮೆನ್ನರುಮುಱುಗುಂ || ೪೫೭

ಪತ್ರಂ ಭುಜಂಗಸಮಿತಿ ಕ
ಳತ್ರಂ ದಳ್ಳುರಿ ವಿಭೂಷಣಾವಳಿ ಭೂಭೃ |
ತ್ಪುತ್ರಿ ಗವಾಧಿಪನಜಿನಂ
ನೇತ್ರಂ ನಿವಸನವೆನಿಪ್ಪನೊಸೆಗೆಮಗಭವಂ || ೪೫೮

---

1 ಮಿಂತು (ಒ.ಮ.ಅ). 2 ಗೆಲ್ಲಂ (ಅ). 3 ಮಳಾಕು (ಅ).

## ಸೂತ್ರಂ ೧೦೭

ಅವಧಾರಿಸದುಕ್ತಾರ್ಥಮ
ನವಿಶೇಷದೆ ಮಗುಳ್ದು [1]ನುಡಿದೊಡೇ[1]ಕಾರ್ಥಂ ಕ್ರೋ |
ಧವಿಷಾದಖೇದಭಯಹ
ರ್ಷವಿಸ್ಮಯಾದಿಗಳೊಳಿನ್ನವಿಷ್ಟಮದುಷ್ಟಂ ॥ ೪೫೯

ಪ್ರಯೋಗಂ ॥

ಪೂರ್ವಾರ್ಧಕ್ಕೆ ॥

ಉನ್ಮನಮೆ ಮಾೞ್ಕುಮುತ್ಕೆಯ
ನುನ್ಮದಬರ್ಹಿಣಶಿಖಂಡಿಕೇಕಾವಿರುತಂ |
ತನ್ಮಧುರಧ್ವನಿಯುಂ ಜಳ
ಧನ್ಮೇಘನಿನಾದವೊದವೆ [2]ದೆಸೆದೆಸೆ[2]ಗೆಸೆಗುಂ ॥ ೪೬೦

ಅಪರಾರ್ಧಕ್ಕೆ ॥

ಗಗನಾಧ್ವರ್ ಶರಣಾಗಿಮಾಗಿಮಮರರ್ ನಿಂದಾಸಿಮಾಸಿಂ ದಿಶಾ
ಳಿಗಧೀಶರ್ ನೆರೆದೊಡ್ಡಿವೊಡ್ಡಿಮುರಗರ್ ಬಂದೆಯ್ದಿವೆಯ್ದಿಂ ಮನ |
ಸ್ವಿಗಳೀ ದೈತ್ಯನನಿಕ್ಕಿವಿಕ್ಕಿಮದಟರ್ ಪೂಣ್ದುಣ್ಮಿ ಮುಣ್ಮಿಂ ಯಶೋ
ರ್ಥಿಗಳೆನ್ನಂ ನೆಲೆ[3]ಗುಯ್ಯಿಮುಯ್ಯಿ[3]ಮೆನುತುಂ ತನ್ವಂಗಿ ಪುಯ್ಯಲ್ಚಿದಳ್ ॥ ೪೬೧

## [4]ಸೂತ್ರಂ[4] ೧೦೮

ಕರಿಕಳಭಮೆನೆ ಶಿರಶ್ಶೇ
ಖರಮೆನೆ ನವಪುಷ್ಪಮಾಲೆಯೆನೆ ಮೌಕ್ತಿಕಭಾ |
ಸುರಹಾರಯಷ್ಟಿಯೆನೆ ಪೌ
ನರುಕ್ತ್ಯಮಾಗದು ವಿಶೇಷಸಂಭಾವನೆಯೊಳ್ ॥ ೪೬೨

ಪ್ರಯೋಗಂ ॥

ಆ ರಾಜಶಿರಶ್ಶೇಖರ
ನಾರಿಂದಂ ಪಿರಿಯನಳವಿಯೊಳ್ ಬಳವದಹಂ |
ಕಾರದೆ ಬರೆ [5]ತಗೆವಂ[5] ಸ್ತಂ
ಬೇರಮಕಳಭಮ[6]ನುಪಾತ್ತವಾಲಧಿ[6]ಮೂಲಂ ॥ ೪೬೩

---

1 ಮಿಡುವುದೇ, ಬಿಡುವುಪೇ (ಓ.ಮ). 2 ದಶದಿಶೆ (ಓ.ಮ). 3 ಗೊಯ್ಯಿಮೊಯ್ಯಿ (ಓ). 4 "ಇಲ್ಲ ವಿಶೇಷಗ್ರಹಣಕ್ಕೆ" ಎಂದು ಕೆಲವು ಮಾತೃಕೆಗಳಲ್ಲಿದೆ. 5 ತೆಗೆದಂ(ಓ). 6 ಉದಾತ್ತವಾರಿಧಿ (ಮ).

ನವಕುಸುಮಮಾಲೆ ಮೌಕ್ತಿಕ
ವಿವಿಕ್ತಹಾರಾನುಕಾರಿ [1]ಕರ[1]ಮೊಪ್ಪಿರ್ಕುಂ ।
ಸವಿಲಾಸದಸ್ಯುವನಿತಾ
ನಿವಹಘನಸ್ತನತಟಾಂತರವ್ಯಾಲಗ್ನಂ ॥ ೪೬೪

## ಸೂತ್ರಂ ೧೦೯

ವ್ಯರ್ಥಂ ಪೂರ್ವಾಪರವಿಹಿ
ತಾರ್ಥವ್ಯಾಘಾತದಿಂ ವಿರುದ್ಧಾರ್ಥಪದಂ ।
ಸಾರ್ಥಕಮಕ್ಕುಮನರ್ಥಕ
ದರ್ಥಿತಜನದುಕ್ತಿವಿಷಯದೊಳ್ ಮತ್ತದುವುಂ ॥ ೪೬೫

ಆಯೆರಡರ್ಕಂ ಲಕ್ಷ್ಯಂ ॥

ಎಱಗಿಸು ಭುಜವಿಜಯದಿನಣ
ಮುಱದೆ ಬಿಗುರ್ತಿರ್ಪರಾತಿನೃಪರಂ ಧರ್ಮ ।
ಕ್ಕೆಱೆವಟ್ಟಾಗಿರ್ದಯ್ ನೀಂ
ಪೆಱರಾರುಂ ನಿನಗೆ ಪಗೆವರೆಂಬರುಮೊಳರೇ ॥ ೪೬೬

ಪರದಾರಗಮನಮಾರ್ಯಾ
ಚರಿತಂ[2]ಗೆನಗೆಂತು[2] ಯುಕ್ತಮಕ್ಕುಂ ತತ್ಸಂ ।
ದರರುಚಿರಮಧುರ[3]ವನಿತಾ[3]
ಧರಪಾನಂ ತಾನದೆಂತು ಪೇೞ್ [4]ಕೂ[4]ಡುಗುಮೋ ೪೬೭

## ಸೂತ್ರಂ ೧೧೦

ಮೊದಲೊಳ್ ಮುಂ ಪೇೞ್ದುದ್ದೇ
ಶದಂದಮನುದೇಶಮಾಗದಂದಕ್ರಮಮಿ ।
ನ್ನದುವುಂ ಸಂಬಂಧಕ್ಕಾ
ವುದಾನು[5]ಮವ[5]ಬೋಧಹೇತುವಾ[6]ದೊಡ[6]ದೋಷಂ॥ ೪೬೮

ಉದಾಹರಣೆ ॥

ಸತ್ವರಜಸ್ತಮೋಗುಣವಿಭಾಗದಿನೀ ತ್ರಿಜಗಕ್ಕೆ ತಾನೆ ಕ
ರ್ತೃತ್ವದೊಳೊಂದಿಯುಂ [7]ನೆಱೆಯೆ[7] ಸಂಹರಿಸಲ್ [8]ನೆಱೆದುಂ[8] ಸಮಂತು ನಿ ।

---

1 ಕಳ (ಓ). 2 ನಿನಗೆಂತು (ಅ). 3 ವ್ರತಾ (ಅ). 4 ಮೂೞ (ಅ).
5 ಮನು (ಅ.ಇ). 6 ದೊಡೆ (ಓ). 7 ಬೆಱೆಯೆ (ಅ). 8 ಮೆಱೆದುಂ (ಅ).

ತ್ಯತ್ವಮನಾಂತುಮಿಂಶನಜನಚ್ಯುತನೆಂಬಿನೆಗಂ ವಿಭಿನ್ನಮೂ
ರ್ತಿತ್ವಮನಪ್ಪುಕೆಯ್ದು ಪರಮೇಶ್ವರನೀಗೆಮಗಾಪ್ತತತ್ವಮಂ ‖ ೪೭೯

ವಾತಂ ಪಿತ್ತಂ ಕಫಮೆಂ
ಬೀ ತೆಱದಿಂ ಮೂಱು ದೋಷಮಾದ್ಯಂತಸಮಾ ।
ಖ್ಯಾತಂಗಳವುಷ್ಣದಿನತಿ
ಶೀತದಿನುಪಶಮಿಕುಮಲ್ಲಿ ಮಧ್ಯಮದೊಂದುಂ ‖ ೪೭೦

## ಸೂತ್ರಂ ೧೧೧

ಕಾಳಸ್ವಭಾವದೇಶಸ
ಮಾಳಕ್ಷಿತವಸ್ತುರೂಪವಿಪರೀತಮ[1]ದಂ ।
ತಾ[1]ಳೋಕ[2]ವಿರುದ್ಧಂ ಗುಣ
ದೋಳಿಗೆ ವಂದಿರ್ಕುಮರಮೆ[2] ಕವಿಕೌಶಲದಿಂ ‖ ೪೭೧

ಅನಿತರ್ಕಂ ಲಕ್ಷ್ಯಂ ‖

ವಿಕಚಾಂಭೋರುಹಷಂಡಮುನ್ಮದಮರಾಳಾನೀಕಮುತ್ಫುಲ್ಲ ಚಂ
ಪಕಮಾಕಂದಮಹೀಜಮುಜ್ವ್ವಳಮಿಯದ್ರಂಗಂ ಸ್ಫುಟತ್ಕೋಕಿಲ ।
ಪ್ರಕಟಾರಾವಪರಂಪರಾಪರಿಗತಾಶಾಕುಂಜಮಕ್ಷೀಬ ಕೇ
ಕಿಕದಂಬಂ ಜಗತೀಜನಕ್ಕೆ ಪಡೆದತ್ತಭ್ರಾಗಮಂ ರಾಗಮಂ ‖ ೪೭೨

ಇದು ಕಾಲವಿರುದ್ಧಂ ‖

ಕೋಡುಳ್ಳ ತುರಂಗಂ ಬಂ
[3]ಡಾಡುವ[3] ನವಕರ್ಣಿಕಾರಮತಿಮಧುರತೆಯೊಳ್ ।
ಕೂಡಿದ ನಿಂಬಾರಾಮಂ
ನಾಡೊಳಗೊಳವೆಂದೊಡಿನ್ನದೇವರ್ಣಿಪುದೋ ‖ ೪೭೩

ಇದು ಸ್ವಭಾವವಿರುದ್ಧಂ ‖

ಕರ್ಪೂರಧೂರುಹಾರಾಮೋ
ತ್ಸರ್ಪದ್ಧೂಳೀ [ವಿ]ಧೂಸರಂ ।
ತೋರ್ಪುದಾತಿಥ್ಯಮಂ[4] ಮಾಡಲ್
ಬರ್ಪಂತೀ ಮಲಯಾನಿಲಂ[4] ‖ ೪೭೪

ಇದು ದೇಶವಿರುದ್ಧಂ ‖

---

1 ದಿಂನಾ (ಅ). 2 ವಿರುದ್ಧಗುಣಂಲಾಲಸದೊಳ್ಗೆ ಮಧುರ (ಓ), ವಿರುದ್ಧಂ ಗುಣಲಾಲಸದೊಳಿಮಿಸುಗೆ (ಮ). 8 ಡೋಡಿದ (ಅ.ಮ). 4 ಮೆನೆಮಾಡಲಾರ್ಪಂ ಬರ್ಪಂತಿರೆ ಬಂದುದಂದುಮಲಯಾನಿಲನಿಂ (ಓ.ಮ).

ಬೇಱೊಂದದ್ಭುತರಸಮಂ
ಬೀಱುತ್ತುಮನೇಕವಿವಿಧಫಲಪರಿಣತಿಯಿಂ |
ದಾಱುಂ ಋತುಗಳುಮೊಡನೆಯೆ
ತೋಱಿದುವು ತಪಃಪ್ರಭಾವದಿಂ [1]ಮುನಿಪತಿಯಾ[1] ೪೭೫

ಇದು ಕವಿಕೌಶಲಂ

## ಸೂತ್ರಂ ೧೧೨

ನ್ಯಾಯಾಗಮನೃಪವಿದ್ಯಾ
ವ್ಯಾಯಕಲಾಕಾಮತಂತ್ರವಿಷಯವಿರೋಧ |
ಪ್ರಾಯಂ ಶಾಸ್ತ್ರವಿರುದ್ಧಂ
ಶ್ರೇಯಮದಂತೆಲ್ಲಿಯಾನುಮುಕ್ತಿಕ್ರಮದಿಂ || ೪೭೬

ಉದಾಹರಣ ||

ಅವಿನಶ್ವರಗತಿ[2]ಸಂಸ್ಕಾ[2]
ರವೆಂಬ [3]ಸುಗತೋಕ್ತಿ[3] ಸತ್ಯಮಂತಲ್ಲದೊಡಾ |
ನವನೀಲನೀರಜಾಕ್ಷಿಯ
ಸವಿಲಾಸಾಲೋಕಮಿನ್ನುಮಿರ್ಕುಮೆ ಮನದೊಳ್ || ೪೭೭

ಉಪನಯನಂಗೆಯ್ಯದೆಯುಂ
ಸ್ವಪೂರ್ವವಾಸನೆಯ ಬಲದಿನಿಂತೀತಂ ವೇ |
ದಪುರಾಣವೇದಿಯಾದಂ
ವ್ಯಪೇಕ್ಷೆಗೆಯ್ಗುಮೆ ವಿಶುದ್ಧಮಣಿ [[4]ಸಂಸ್ಕೃತಿ[4]]ಯಂ || ೪೭೮

ಉಱಿದುವರ್ಕುಮಿಾ ತೆಱದಿ[5]ನಱುದುಕೊಳ್ವುದು[5]

## ಸೂತ್ರಂ ೧೧೩

ನಿಯತಸ್ಥಾನಂ ಪದವಿಸೃ
ತಿಯೊಳಾದ ವಿರಾಮಮಱಿಗೆ ಯತಿಯಕ್ಕುಮದ |
[6]ಕರ್ಣಯಥಾಗತಿ[6] ಯತಿಭಂಗಂ
ಪ್ರಯುಕ್ತಸಮಭರವಿಭಾಗದೊಳ್ [7]ನಿರ್ದೋಷಂ[7] || ೪೭೯

---

1 ತನ್ಮುನಿಯಾ (ಅ). 2 ಸಂಸಾ (ಅ). 3 ಸಂಗೋಕ್ತಿ (ಅ.ಮ). 4 ಸಂಸೃತಿ (ಅ.ಇ). 5 ನಱುವುದು (ಓ.ಮ). 6 ಕರ್ಣಯಥಾರ್ಥಗತಿ (ಅ). 7 ನಿರ್ದುಷ್ಟಂ (ಅ).

ಪ್ರಯೋಗಂ ॥

ಅತಿಮೃದುವನಿಟಿಸುಗುಂ ಮ
ತ್ತತಿತೀವ್ರನನಣಮೆ ಜನಮುದೆಳಸದದೆಂತುಂ ।
ಮತಿವಂ[1] ತನಂತಱಿಂದೀ[1]
ಕ್ಷಿತಿಯುಂ [2]ಬಸದಾಗಿ[2] ಮಾಳ್ಕೆ ಮಧ್ಯಮಗತಿಯಿಂ ॥ ೪೮೦

ಇಂತೀ ಪೇಳ್ದಾನೃಪಗುಣವಿಭೇದಂಗಳಂ ತಾಳ್ದಿ ನಿಂದಾ
ತಂ[3] ತನ್ನೊಳ್[3] ತಾಳ್ದುಗುಮಖಿಳಲೋಕೈಕಸಾಮ್ರಾಜ್ಯಮಂ ವಿ ।
ಭ್ರಾಂತೇಂ ಭೂಮ್ಯಂತರರಿಪುಗಳಂ ಗೆಲ್ದು ವಿಕ್ರಾಂತದಿಂ ಕ
ಲ್ಪಾಂತಸ್ಥಾಯಿಪ್ರಕಟವಿಹಟತ್ಕೀರ್ತಿಗಂ ಕಾಂತನಕ್ಕುಂ ॥ ೪೮೧

## ಸೂತ್ರಂ ೧೧೪

ಗುರುಲಘುರಚನೆಗೆ ನಿರ್ದಿ
ಷ್ಟರೂಪಹೀನಾಧಿಕಾಕ್ಷರಂ ಛಂದದೊಳೊಂ ।
ದಿರೆ ಭಿನ್ನವೃತ್ತಮೆಂಬು[4]ದು[4]
ದುರುಕ್ತಮತ್ಯಂತದೋಷಮಕ್ಕುಂ ಕೃತಿಯೊಳ್ ॥ ೪೮೨

ಲಕ್ಷ್ಯಂ ॥

ಜೀಮೂತಕೇತುಗಣ್ಣಂ
ಗೆ ಮೇಘವಾಹನನದೆಂತು ಮುಂ ಬೆಸಕೆಯ್ದಂ ।
ನಿಮ್ಮಣ್ಣಂಗೆ ಮತಂಗಂ
ಗಾ ಮಾಳ್ಕೆಯ ವಿನಯದಿಂದೆ ನೀಂ ಬೆಸಕೆಯ್ಯಿಂ ॥ ೪೮೩

ಪಣಮ[5]ನೀಯನಂ[5] ಪ್ರಿಯಂ ನುಡಿದೆಂತುಂ
ಮಾಣೆ ಮತ್ತವನ ಪಂಬಲನೆಂತುಂ ।
ಕೇಣಕಾಱನನದೇ[6]ಕೆಗ ಕಾವ್ಯೈ[6]
ನಾಣಪುತ್ತ ನಗೆಯಂ ನೀಂ ಬಗೆಯ್ಕೆ ॥ ೪೮೪

## ಸೂತ್ರಂ ೧೧೫

ಮಿಗೆ ದಲ್ ವಲಂ ವೆಱಿಂ ಮ
ತ್ತೆ ಗಡಂ ಗಳ ಕೆನ್ನಮೆಂಬನರ್ಥಕಪದಮಂ ।

---

1 ತರದಱುವುದಿಂತೀ (ಒ), ತರದಱುನಿಂತೀ (ಅ), ತರಱುವರಿಂತೀ (ಮ). 2 ವಶಮಾಗಿ (ಅ). 3 ತವ್ಮೊಳ್ (ಅ.ಒ). 4 ದಾ (ಒ). 5 ನೀಯಿನೆಂ (ಒ.ಮ). 6 ಗಣಿಕೆವ್ವೈ (ಒ).

ಸೊಗಯಿಸೆ [1]ವಾಕ್ಯಾ[1]ಲಂಕೃತಿ
ನೆಗಬ್ದೆಡೆಯೊಳ್ ಪೇಲ್ಗೆ ಪೇೞದಿರ್ಕುೞಿದೆಡೆಯೊಳ್ ॥ ೪೮೫

ವಿರಹಿ ಮೃಗಂ ದಲಂ[2]ಜಿಸುವವಂ ಮಧು ದಲ್[2] ಬಲೆಗಳ್ ಲತಾಳಿ ದಲ್
ಕರಿಕು ಕನಲ್ದು ಕಾಯ್ದು ವಿರಹಾಗ್ನಿ ದಲೊಪ್ಪುವ ಕೆಯ್ಕೊಳಂ ದಲಾ ।
ಗುರಿ ಪವನಂ ದಲೆಂಬಿನಮನಂಗನ ಬೇಂಟೆಯ [3]ಬಿಂದದಂತೆ ಬಂ
ದಿರೆ[3] ಪೊಸನುಗ್ಗಿ ಕೆಯ್ಗುೞಿಯೆ ಕಣ್ಗೆಸೆದಿರ್ದುವು ನಂದನಾಳಿಗಳ್ ॥ ೪೮೭

ಮಾವಿನ ಕೊನೆ ಮಾವಿನ ನನೆ
ಮಾವಿನ ಪೂ ಮಾವಿನೆಳೆಯ ಮಿಡಿ ಮಾವಿನ ಕಾಯ್ ।
ಮಾವಿನ ಪಣ್ಣೆಂದು ಜನಂ
ಭಾವಿಸೆ ಸರ್ವಾಂಗಸುಂದರಂ ಮಾವೆ ವಲಂ ॥ ೪೮೭

ವಿಕ್ರಮವಹ್ನಿ ಮುನ್ನಳುರ್ದುಕೊಂಡುದು ತನ್ಮನಿಯಂ ಗಡಶ್ವಮೇ
ಧಕ್ರತು ಧೂಮವಾದುದು ಗಡಂ ಬೞಿಯಂ ಶಿಖಿ ಧೂಮಯೋನಿಯೆಂ ।
ಬೀ ಕ್ರಮಮೆಂತು ಪೇೞಿಮೆನೆ ವಿಕ್ರಮಯಜ್ಞವಿಧಾನಮಂ ಧರಾ
ಚಕ್ರಮೆ ಮೆಚ್ಚಿ ಬಣ್ಣಿಸೆ ಜಸಂಬಡೆದಂ ಪೊಲಕೇಶಿವಲ್ಲಭಂ ॥ ೪೮೮

ತೊಳಗೆ ಪೊನ್ನರಥಂ ರಥವಾಜಿ[4]ಗಳ್[4]
ಕಿಳಿಱೆ ವೀರರಸಂ ಕರೆಗಣ್ಮೆ ಕಂ ।
ಟಳಿಸೆ ಮೆಯ್ನವಿರಗ್ಗಳವೊಪ್ಪಿದಂ
ಗಳ ಸರಿತ್ಸುತನಾಹವಲಂಪಟಂ ॥ ೪೮೯

ಅಂಕುರದಿಂ ಪ್ರವಾಳಚಯದಿಂ ನವಕುಟ್ಮಲಶೋಭೆಯಿಂ ಬೆಡಂ
ಗಂ ಕುಡುಶಿರ್ಪ ಪುಷ್ಪರುಚಿಯಿಂ ವಿಳಸತ್ಫಳಸಂಕುಳಂಗಳಿಂ ।
ಪಂಕರುಹಾಸನಂ ಬರೆದು ಬರ್ಚಿಸಿದಂತಿರೆ ನೋೞ್ಪೊಡೆತ್ತಲುಂ
ತಾಂ ಕರವೊಪ್ಪಿ ತೋಱು[5]ವುದು[5] ಬಂದ [6]ಬಸಂತದೊಳೊಂದು ಮಾಮರಂ[6] ॥

ಪಗಲೊಪ್ಪದು ಶಶಿ ನಿಶೆಯೊಳ್
ಸೊಗಯಿಸದರವಿಂದಮದಱಿನಂತೆರಡುಮನೆಂ ।
ತು ಗಡ ಸಮನೆಂಬೆನಾ ಶಿಶು
ಮೃಗನಯನೆಯ ಪಗಲುಮಿರುಳುಮೊಪ್ಪುವ ಮೊಗಮಂ ॥ ೪೯೧

1 ಕಾವ್ಯಾ (ಅ.ಮ). 2 ಲಾಡಿಸುವವಂ ಮದನಂ (ಒ). 3 ಬೀಜದಂದದಿಂ ಬರೆ (ಒ.ಮ). 4 ಯೊಳ್ (ಒ.ಮ). 5 ವುವು (ಒ.ಮ). 6 ಬಸಂತದ ನಂದನಾಳಿಗಳ್ (ಒ ಮ)

ಕೀಱು ಪೌರುಷಮನಾತ್ಮಪುಣ್ಯದಿಂ
ಬೇಱೆ ಮಾಡ[1]ದೆಸಕ್ಕೊಂ[1] ವಿರೋಧಿಯುಂ ।
ಮಿಾಱುಗುಂ ವೆಱಿವೆಱಂಕೆಯೊಂದಱಿಂ
ಪಾಱಲಾರ್ಕರ್ಮ ಪತತ್ರಿರಾಜನುಂ ॥ ೪೯೨

ಆ ಕಥೆ ಮತ್ತೆಂತೆಂದೊಡೆ
ಭೀಕರಕರಿಮಕರನಿಕರಭಿನ್ನತರಂಗಾ ।
ನೀಕಲವಣಾಂಬುರಾಶಿವ್ಯ
ತಾಕೃತಿ ಕಮನೀಯಮುಂಟು ಜಂಬೂದ್ವೀಪಂ ॥ ೪೯೩

ಬಿಚ್ಚತಮಿರ್ದು ಕಣ್ಣ ಪಸವೋಡುವಿನಂ ಸಲೆ ನೀನೆ ನೋಡ ಪೆ
ರ್ಮಚ್ಚರನಿಕ್ಕಲೆನ್ನ ಭುಜದಂಡಮೆ ಸಾಲದೆ ಕೆನ್ನಮೆಲ್ಲಿಯುಂ ।
[2]ಮಚ್ಚದೊನಿಲ್ಲ[2] ನಿನ್ನಳವನಿನ್ನದಱಿಂ ಗಳ ನೀನೆ[3]ಯಾನಕ
ವ್ಯಚ್ಚಿತನಯ್[3] ತ್ರಿಶಕ್ತಿಯುತನಯ್ ವಿಜಿಗೀಷುವಯಸ್ತವೈರಿಯಯ್ ॥ ೪೯೪
ಮತ್ತಮುಟಿಪಾವರ್ಕ್ವಿಾ ತೆಱದಿಂ ನೋಡಿಕೊಳ್ವುದು ॥

ಇದು ಕಾವ್ಯಮಲವ್ಯಾವೃತ್ತಿಯೊಳ್ ವಾಕ್ಯವಾಕ್ಯಾರ್ಥದೋಷಾನು
ಕೀರ್ತನಪ್ರಕರಣಂ ದ್ವಿತೀಯಂ

---

ಗೀತಿಕೆ ॥

ಈ ಪೇಳ್ದ ಮಾಳ್ಕೆಯಿಂ ದೋಷಾ
ಲೇಪಂ ಪೊರ್ದದಂತಿರೆ ಸನ್ನಿಬಂಧ ।
ವ್ಯಾಪೃತನಕ್ಕೆ ಗುಣವದರ್ಥಂ
ವ್ಯಾಪಕಮಾಗೆ ಕವಿತ್ವ ತತ್ವದೊಳ್ ॥ ೪೯೫

[4]ಸಮುಚಿತ[4]ಕೃತಿದೋಷದೂಷ್ಯಮಾರ್ಗ
ಕ್ರಮಪರಿಭಾವಿತ ಚಿತ್ತವೃತ್ತಿಯಪ್ಪಂ ।
ಗಮಳಿನ ಕವಿತಾಗುಣೋದಯಶ್ರೀ
ಸಮನಿಸುಗುಂ ಸತತಾಭಿಯೋಗದಿಂದಂ ॥ ೪೯೬

ಸಾರವಿಚಾರ [5]ಬಂಧುರ[5]ಮತಿಪ್ರಸರಂ ಪರಿಪಕ್ವಶಾಸ್ತ್ರಸಂ
ಸ್ಕಾರನುಪೇತಕೌತುಕರಸಂ ವಿದಿತಾಗಮಲೋಕವೃತ್ತನು ।

---

1 ದೆಸೆಪಂ (ಓ). 2 ಮೆಚ್ಚದೊನಲ್ಲ (ಅ). 3 ಯಾನೆಕಾಬ್ಯಚ್ಯುತನಯ್ (ಅ)
4 ಸಮುದಿತ (ಅ.ಓ). 5 ಚಂಚುರ (ಮ).

ತ್ಸಾರಿತಮತ್ಸರಂ ಸುಜನವತ್ಸಲನೆಲ್ಲಿಯುಮಿೀತನೆಂದು ಕೆ
ಯ್ವಾರದೆ ಬಣ್ಣಿಕುಂ ವಿಬುಧಮಂಡಳಿ ಪಂಡಿತನಾಗವರ್ಮನಂ ‖ ೪೯೭

ಇದು ಸಕಳಸುಕವಿಜನಮನಸ್ಸರೋಜಿನೀರಾಜಹಂಸಾಯಮಾನಾನೂನ
ಕವಿತಾಗುಣೋದಯಂ ಶ್ರೀನಾಗವರ್ಮಪ್ರಣೀತಮಪ್ಪ
ಕಾವ್ಯಾವಲೋಕನದೊಳ್ ಕಾವ್ಯಮಲವ್ಯಾವೃತ್ತಿ
ಯೆಂಬುದು ದ್ವಿತೀಯಾಧಿಕರಣಂ



# ಗುಣವಿವೇಕಾಧಿಕರಣಂ

---

## ಮಾರ್ಗವಿಭಾಗದರ್ಶನಪ್ರಕರಣಂ

ಇದು ಸೌಂದರ್ಯಗುಣಪ್ರಕಾಶಮಿದು ತಾನಗ್ರಾಮ್ಯತಾಧಾನಮಿಂ
ತಿದು ಭಾಸ್ವತ್ಪರಭಾಗರಮ್ಯಮಿದು ಬಂಧಾಶ್ಲೇಷವಿಚ್ಛಿತ್ತಿಗಾ ।
ಸ್ಪದಮೆಂ[1]ದಿಂತು[1] ಚಿತಪ್ರಯೋಗ[2]ವಿಧಿಯಿಂ ಸಯ್ತಪ್ಪಿನಂ[2] ತಿರ್ದಿ ಪೇ ।
ಳ್ಪುದು ಪೂಮಾಲೆಯನಿಂಬಿನಿಂ ಸಮೆವವೋಲ್ ಸತ್ಕಾವ್ಯಮಂ [3]ಕಬ್ಬಿಗಂ[3] ॥೪೯೮

### ಸೂತ್ರಂ ೧೧೬

ನಿರತಿಶಯಕಾವ್ಯಶೋಭಾ
ಕರಂಗಳಾಗಿರ್ಪ ಧರ್ಮಮವು ಗುಣಮಕ್ಕುಂ ।
ಪರಮಪುರಾಣಕವೀಶ್ವರ
ನಿರೂಪಿತಂಗಳ್ ವಿಚಿತ್ರಮಾರ್ಗಯುತಂಗಳ್ ॥ ೪೯೯

### ಸೂತ್ರಂ ೧೧೭

ಸಮಸಂಶ್ಲಿಷ್ಟಾರ್ಥವ್ಯ
ಕ್ತಿಮಧುರಕಾಂತಪ್ರಸನ್ನಸುಕುಮಾರೋಜ ।
ಸ್ಸಮಭಿಮತೋದಾರಾಹ್ವಯ
ಸಮಾಧಿಗಳ್ ಕೃತಿಗುಣಂಗಳೀರಯ್ದಕ್ಕುಂ ॥ ೫೦೦

### ಸೂತ್ರಂ ೧೧೮

ಅದೆಂತೆನೆ ॥

ಸಮಮೆಂಬುದು ಬಂಧದೊಳವಿ
ಷಮಂ ಮೃದುಸ್ಫುಟವಿಮಿಶ್ರ[4]ವಿನ್ಯಾಸಪದ[4] ।
ಕ್ರಮದಿಂ ಮೂಱು ತೆಱಂ ಬಂ
ಧಮುಂ ಯಥಾರ್ಥಾನುವೃತ್ತಿಯಿಂ ವರ್ತಿಸುಗುಂ ॥ ೫೦೧

---

1 ದೆಂದು (ಓ.ಮ). 2 ವಿಧಿಯಂಸ್ಥೈತಿರ್ಪಿನಂ (ಅ). ೩ ಕಪ್ಪಿಗಂ (ಮ).
4 ವರ್ಣೋದಾತ್ತ (ಓ.ಮ).

ಉದಾಹರಣೆ ॥

ಮೃದುಬಂಧಕ್ಕೆ ॥

ಶರದದೊಳೊನಲ್ದು [1]ಬಿಡುತುಂ[1]
[2]ಧರೇಂದ್ರಗಿ[2]ರಿಕರಿಗಳುಡಿಯೆ ಪಾಯ್ದುವು ಕಾಯ್ಪಿಂ ।
ಕರಟತಟಗಳಿತಮದಜಳ
ಪರಿಮಳಸಮುದಿದಳದಳಿಕುಳಂ ನಗಕುಳಮಂ ॥ ೫೦೨

ಸ್ಫುಟಬಂಧಕ್ಕೆ ॥

ಅಂಭೋನಿಧಿಗಂಭೀರಂ
ಶುಂಭದ್ಭುಜಗೇಂದ್ರಭೋಗನಿಭಭುಜಪರಿಘಂ ।
ಜಂಭಾರಿವೈಭವಂ ವಿ
ಶ್ವಂಭರೆಗಧಿನಾಥನಶ್ವಕಂಠಂ ಖಚರಂ ॥ ೫೦೩

ಮಿಶ್ರಬಂಧಕ್ಕೆ ॥

[3]ಹಸ್ತಾವಚಯದಿ ನುರು[3] ಪು
ಷ್ಪಸ್ತಬಕಮನುನ್ಮದಭ್ರಮದ್ಭ್ರಮರಪರಿ ।
ತ್ರಸ್ತಮತಿ ಮೆಲ್ಲನೆಱಗಿ ಪು
ನಸ್ತನವತಿ ಕೊಯ್ದುಳಾಮ್ರಶಾಖೆಯೊಳೊರ್ವಳ್ ॥ ೫೦೪

## ಸೂತ್ರಂ ೧೧೯

ಅಶಿಥಿಲಪದಚಯರಚನಾ
ತಿಶಯಂ ಸಂಶ್ಲಿಷ್ಟಮೆಂಬುದಕ್ಕುಮನೇಯಂ ।
ವಿಶದಾರ್ಥಂ ಶಬ್ದಾನ್ವಯ
[4]ವಶ[4]ಮರ್ಥವ್ಯಕ್ತಿಯೆಂದು ಪೇೞಲ್ಪಡೆಗುಂ ॥ ೫೦೫

ಉದಾಹರಣೆ ॥

ಸಂಶ್ಲಿಷ್ಟಕ್ಕೆ ॥

ಅದಿರದಿದಿರಿದಿರನೆಯ್ತಂ
ದೊದಱುತ್ತುಂ ಪೊಕ್ಕು ಪಟುಪವಿಪ್ರತಿಮಭುಜಂ ॥
ಕೆದಱು ಮೆಱೆದೋವದೆಚ್ಚಂ
ಕದನದೆ ವಿದ್ವಿಡ್ಬಳಪ್ರಧಾನರನಿಂದ್ರಂ ॥ ೫೦೬

---

1 ಬಿರ್ದುತಂ (ಓ.ಮು). 2 ದುರಗಿಂಚರ (ಓ). 3 ಹಸ್ತಾವನಿಚಯಾಪಃಂ (ಓ.ಮು) 4 ಮಸ (ಓ.ಮು).

ಅರ್ಥವ್ಯಕ್ತಿಗೆ ||

ಓರಂತೆ ಪರೆದ ನವಸಂ
ಧ್ಯಾರುಚಿಯಿಂದಪರದಿಗ್ವಿಭಾಗದೊಳಿನಿಸೊಂ |
ದಾರಕ್ತಮಾಗಿ ನೀಱಲ
ದೋರೆಯನನುಕರಿಪುದಾದುದಾಗಸಮಾಗಳ್ || ೩೦೭

ನೇಯಕ್ಕೆ ||

ಅರಕ್ತಮಾಗಿ ನೀಱಲ
ದೋರೆಯನನುಕರಿಪುದಾದುದಾಗಸಮೆನೆ ಸಂ |
ಧ್ಯಾರುಚಿಯಿನಕ್ಕುಮೆಂದವ
ಧಾರಿಸಿ ನೆಱೆಯಱಿದುಕೊಳ್ವು[1]ದಿದು[1] ನೇಯಾರ್ಥಂ || ೩೦೮

## ಸೂತ್ರಂ ೧೨೦

ಅಗ್ರಾಮ್ಯವಚನವೃತ್ತಿ ಸ
ಮಗ್ರರಸಾಪೂರ್ಣಮಪ್ಪುದದು ಮಧುರಂ ನಿ |
ರ್ವ್ಯಗ್ರ[2]ಪದವಿಸ್ಸತಿ ಪರಚಿ
ತ್ತಗ್ರಹಣ[2]ಸಮರ್ಥಮಪ್ಪುದಂತದು ಕಾಂತಂ || ೩೦೯

ಉದಾಹರಣೆ ||

ಮಧುರಕ್ಕೆ ||

ಅಳಿಕುಳರುತಿಗಳಿನವನತ
ಫಳತರುಗಳಿನುಚಿತಕುಸುಮಗಂಧದಿನಬಳಾ |
ವಿಳಸನದಿಂದೀವುದು ಗಂ
ಧಿಳವಿಷಯಂ ಸಕಳವಿಷಯರಸರಸಿಕತೆಯಂ || ೩೧೦

ಕಾಂತಕ್ಕೆ ||

ಅರಸಾಳ್ತನವೆನ್ನದೆ ಕೇಳ್
ಪರಮಾರ್ಥಮನೀಗ[3]ಳೆನಗೆ[3] ಸಾಮ್ರಾಜ್ಯಪದಂ |
ದೊರೆಕೊಂಡಂತಾದುದು ಪೋ
ಲ್ತಿರೆ ದೇವರ ಬರವೆ ದೇವದೇವರ ಬರವಂ || ೩೧೧

## ಸೂತ್ರಂ ೧೨೧

ಅತಿರೂಢಾರ್ಥಮಗೂಢಂ
[4]ಪ್ರತೀತಿ[4]ಸುಭಗಂ ಪ್ರಸನ್ನಮೆನೆಪಡೆಗುಮಪಾ |

---

1 ದದು (ಅ.ಮ). 2 ಪದಸ್ಥಿತಿರಚಿತೋಪಗ್ರಹಣ. 3 ಳೆಮ್ಮ (ಅ).
4 ಪ್ರತೀತ (ಅ.ಮ).

ಕೃತನಿಷ್ಠುರಾಕ್ಷರಂ ಲಾ
ಲಿತಲಲಿತಪದಪ್ರಕಾರಮದು ಸುಕುಮಾರಂ ॥ ೫೧೨

ಅವರ್ಕ್ಕನುಕ್ರಮಪ್ರಯೋಗಂ ॥

ಮಡುಗಳೊಳಗಲರ್ದ [1]ನೆಯ್ದಿಲ[1]
ಕಡುಗಂಪುಮನಿವಱ [2]ಕಂಪೆ[2] ಗೆಲ್ದುವು ಸಾಸಿ ।
ರ್ಮಡಿಯೆನೆ ಪೊಂಬಣ್ಣದ ಕೆಂ
ಪಿಡಿದಿರೆ ಸೊಗಯಿಪುವು ಗಂಧಶಾಲಿವನಂಗಳ್ ॥ ೫೧೩

ಮಣಿಭವನಂಗಳ ರುಚಿಗಳ್
ಪೆಣೆದು ನಭೋಂಗಣದೊಳಮರಚಾಪವಿಳಾಸ ।
ಕ್ಕೆಣೆಯಾಗಿರೆ ಬಹುವಿಧದಿಂ
ಕುಣಿವುವು ಕಾರ್ಗೆತ್ತು ಕೇಗಿ ಸೋಗೆನವಿಲ್ಗಳ್ ॥ ೫೧೪

## ಸೂತ್ರಂ ೧೨೨

ಪಿರಿದುಂ ಸಮಾಸಮಾಗಿರೆ
ವಿರಚಿಸುವುದು ತಾನದೋಜಮಕ್ಕುಂ ಲೋಕೋ ।
ತ್ತರವರ್ಣನಂ ವಿಶೇಷಣ
ಪರಪ್ರಕರ್ಷೋಕ್ತಿಯುಕ್ತಮಪ್ಪುದುದಾರಂ ॥ ೫೧೫

ಉದಾಹರಣೆ ॥

ಓಜಕ್ಕೆ ॥

ಬಕಕುರರಪಕ್ಷ[3]ವಿಕ್ಷಿ[3]
ಪ್ತಕಂಜಕಿಂಜಲ್ಕಪುಂಜಪಿಂಜರಿತಾಚ್ಛೋ ।
ದಕಪರಿಪೂರ್ಣತಟಾಕ
ಪ್ರಕರಸರೋನಿಕರರಂಜಿತಾಶಾವಲಯಂ ॥ ೫೧೬

ಉದಾರಕ್ಕೆ ॥

ಬಹು[4]ಪೋಷಣದಿಂ[4] ಮಾವಿನ
ಸಹಕಾರದ ಸೊನೆಯ ಸೋನೆ ಬೆಳೆಯಿಸೆ ಬೆಳೆಗುಂ ।
ಮಹಿಯೆನೆ ಬಣ್ಣಿಸುವ ಪಿತಾ
ಮಹಂಗಮಱಿದೆಗ್ಗ ವೊಗ್ಗೆ ನಿನಗಮದೆನಗಂ ॥ ೫೧೭

1 ನೆಯ್ದಲ. 2 ಕಂಪೆ (ಅ). 3 ವಿಕ್ಷಿ (ಓ.ಮ). 4 ದೋಷಮಾನಿಂ (ಓ), ಪೋಷಮಾನಿಂ, ವರ್ಷಮಾನಿಂ (ಅ).

ಮತ್ತಮಲ್ಲ ಶ್ಲಾಘ್ಯವಿಶೇಷಣಕ್ಕೆ ॥
ಮನೆಮನೆದಪ್ಪದೆಯುಂ ಪಳು
ಕಿನ ಕೇರ್ಗಳ್ ಪವಳದೆಸೆವ ಕಂಬಂ ಕರ್ಕೇ ।
ತನದ ತೊಲೆ ಪೊನ್ನ ಪೊಸಜಂ
[1]ತೆ[1] [2]ನೀಲದಡಿಗಲ್ಗಳೆಂ[2]ದೊಡೇವಣ್ಣಿಪುದೋ ॥ ೫೧೮

## ಸೂತ್ರಂ ೧೨೩

ಪೆಱವಱ ಧರ್ಮಂಗಳನೇ
ತೆಱದಿಂದಂ ತಂದು ಪೆಱವಱೊಳ್ ಪತ್ತಿಸಿ ಕ ।
ಣ್ದೆಱೆಯೆ ಚತುರೋಕ್ತಿ ಕೃತಿಯೊಳ್
ನೆಱೆದಿರೆ ಪೇಲ್ವುದು ಸಮಾಧಿಯೆನೆ ಪೆಸರ್ವಡೆಗುಂ॥ ೫೧೯

ಉದಾಹರಣೆ ॥
ವಿನಿಮೀಲಿತನೀಲಾಂಬುಜ
ವನಮುನ್ಮೀಲಿತನವೀನಕಮಲವನಂ ತ ।
ದ್ದಿನಮುಖದೊಳ್ ಮಧುಪಾಳಿಗೆ
ಜನಿಯಿಸಿದುವು ಪಟಿಯ ಸುಸಿಲ ಪೊಸ ಸುಸಿಲಿಂಪಂ ॥ ೫೨೦

## ಸೂತ್ರಂ ೧೨೪

ಇವು ನಿಯತಂ ದಕ್ಷಿಣದೇ
ಶವರ್ತಿಕವಿರಾಜಮಾರ್ಗದೊಳ್ ನೆಗಟ್ಟುಂ ಮ ।
ತ್ತವಱ ವಿಪರ್ಯಯವೃತ್ತಿಯೆ
ಬವರಿಸುಗುಮುದೀಚ್ಯಮಾರ್ಗದೊಳ್ ಪ್ರಚುರತೆಯಿಂ॥೫೨೧

## ಸೂತ್ರಂ ೧೨೫

ವೈದರ್ಭಗೌಡಮಾರ್ಗವಿ
ಭೇದಂ ಬಗೆವೊಡೆ ಗತಾನುಗತಿಕಮಿದೆಂದೊ ।
ಲ್ದಾದರಿಪರ್ ಕೆಲಬರ್ ಸಂ
ವಾದದೊಳೆರಡುಂ ಸಮರ್ಥಮಪ್ಪುದಱಿಂದಂ ॥ ೫೨೨

ಇದು ಗುಣವಿವೇಕದೊಳ್ ಮಾರ್ಗವಿಭಾಗದರ್ಶನ ಪ್ರಕರಣಂ ಪ್ರಥಮಂ.

---

1 ತಿ (ಓ.ಮ). 2 ನಿಂದಡಕಲ್ಗಳೆಂ (ಮ).

# ಶಬ್ದಾಲಂಕಾರನಿರ್ಣಯಪ್ರಕರಣಂ

---

## ಸೂತ್ರಂ ೧೨೬

ನಿಜದಿಂದಂ ಚೆಲ್ವೆಗೆ ವಿಬು
ಧಜನಪ್ರಿಯೆಗ[1]ಖಿಳಲೋಕವಿನುತ[1]ಪ್ರಮದಾ ।
ಗ್ರಜೆಗೆ ಕೃತಿ[2]ಸತಿಗೆ[2] ಶಬ್ದಾ
ರ್ಥಜಾತಮಂತೆರಡು ತೆಱದಲಂಕೃತಿಯಕ್ಕುಂ॥ ೫೨೩

## ಸೂತ್ರಂ ೧೨೭

ಅವಱೊಳ್ ಶಬ್ದಾಲಂಕಾ
ರವಿಭಾಗಂ ಯಮಕಮೆಸೆವನುಪ್ರಾಸಂ ಚಿ ।
ತ್ರವಿಚಿತ್ರಭಿತ್ತಿ ವಕ್ರೋ
ಕ್ತಿ ವಿಶೇಷಮುಮೆನೆ ಚತುರ್ವಿಧಂ ತಾನಕ್ಕುಂ ॥ ೫೨೪

## ಸೂತ್ರಂ ೧೨೮

ಅವಱೊಳಗೆ ॥
ಪದವರ್ಣ *ವ್ಯಾವೃತ್ತಿ ದ
[3]ಲದು[3] ಯಮಕಂ ವ್ಯವಹಿ[4]ತಾವ್ಯ[4]ಪೇತಾತ್ಮಂ ಮ।
ತ್ತದು ಪಾದದಾದಿಮಧ್ಯಾಂ
ತದೊಳಕ್ಕುಮನೇಕಭೇದನಿಯತಸ್ಥಿತಿಯಿಂ ॥ ೫೨೫

ಉದಾಹರಣೆ ॥
ವ್ಯವಹಿತಕ್ಕೆ ॥
ಮಾಣಿಕದಂತೊಪ್ಪಿದನೀ
ಮಾಣಿ ಕರಂ [5]ಕಟಿಯೆ[5] ಚೆಲ್ವುವಡೆದೆಂಬಿನೆಗಂ ।

---

1 ಗಭಿವಿನೂತಕೀರ್ತಿ (ಪ). 2 ನಮಗೆ (ಓ.ಮ).

* ಇಲ್ಲಿ ವ್ಯಾವೃತ್ತಿಯೆಂಬ ಪದವನ್ನು ಆವೃತ್ತಿಯೆಂಬರ್ಥದಲ್ಲಿ ಉಪಯೋಗಿಸಿದೆ. ದಂಡಿಯ ಕಾವ್ಯಾದರ್ಶ III. 1ನ್ನು ನೋಡಿ.

3 ಲದೆ (ಅ). 4 ತವ್ಯ (ಅ). 5 ಕಳೆಯೆ (ಅ).

ಕ್ಷೋಣಿಯನಳೆಯಲ್ ಮುನ್ನಂ
[1]ಕ್ಷೋಣಿಮನಂ[1] [2]ವಿಷ್ಣು ತಾನೆ[2] ವಾಮನನಾದಂ ॥ ೫೨೬

ತಿಂದುಕಪೀನಫಲಂಗಳ
[3]ನೊಂದೊಂದೆಡೆಗಳೊಳಲಂಪು[3] ಪೋಪನ್ನೆವರಂ ।
ತಿಂದು ಕಪೀನಕುಳಂ ವೃತ್ತಿ
ಯಂದದಿನಿರ್ಪುದು ನಿಯುಕ್ತವನ್ಯಾಶನದಿಂ ॥ ೫೨೭

ಫಲಸಾರಸನಮವಂತೆ
ತ್ತಲುವೊದವಿರೆ ಕುಳಿರ್ವ ಪುಟಿಲೊಳೆರ್ದೆಗೊಳ್ವೆನೆಗಂ ।
ಕಲರುತಿಯಂ ಪಾಡಿದುದು
ತ್ಫಲಸಾರಸನಂ ಪುಳಿಂದಲಲನಾನಿಕರಂ ॥ ೫೨೮

ಆಲೋಚಂ ಸಾಲದೆ ಶಿಶು
ಪಾಲನನುಱದಿಕ್ಕಿ ಮಿಕ್ಕ ಭುವನಸ್ಥಿತಿಯುಂ ।
ಪಾಲಿಸು ನೀಂ ನಿನಗೆ ಜಗ
ತ್ಪಾಲನವಿಜ್ಞಾನಮಂ ಪೆಱರ್ ಪ್ರಕಟಿಪರೇ ॥ ೫೨೯

ಸರಭಸದೆ ಕಾಲ[4]ಯಮಸಾ
ಲ್ವರುಕ್ಮಿಬಾಣ[4]ದ್ರುಮಾದಿಗಳ್ವೆರಸಖಿಲಾ ।
ಸುರಚಕ್ರಂ ನಿನ್ನ ವಿಭಾ
ಸುರಚಕ್ರದ ಬಾಯ್ಗೆ ಬಾರದಿರದು ಮುರಾರೀ॥ ೫೩೦

ತಱಸಂದಿಸೆ ಕರಿಘಟೆಯಂ
[5]ತುಱು[5]ಗಿರೆ ಪಾಯ್ದುವು ಶಿಲೀಮುಖಂ ಪುಷ್ಕರದೊಳ್ ।
[6]ಗಱು[6]ಸಂದಿಸೆ ಮೊರೆದೊರ್ವೊದ
ಲೆಱಗುವ ತೆಱದಿಂ ಶಿಲೀಮುಖಂ ಪುಷ್ಕರದೊಳ್ ॥ ೫೩೧

ನೆಯ್ದಿಲೆಸಟಿವಱ ಪೋಲ್ವೆಯ
ನೆಯ್ದಿಲೆ ದಲ್ ಪಡೆದುವಿಲ್ಲ ಲೋಕಮನಲೆಯು ।
ಲ್ಕಯ್ದುಮಲರ್ಗಣೆಗಳಿಕ್ಕೆಮ
ಕೆಯ್ದುಮನೋಜಂಗೆನಿಪ್ಪುವಾಕೆಯ ಕಣ್ಗಳ್ ॥ ೫೩೨

ಮಲರೆ ತಮದೊಡ್ಡು ಪಂಕಜ
ಮಲರೆ ವಿನೀಲೋತ್ಪಲಾಳಿ ಮುಗಿಯೆ ಖಲರ್ ಸಂ ।

---

1 ಕ್ಷೂಣಮನಂ (ಓ), ಕ್ಷೋಣಿವರಂ (ಅ). 2 ತಾನೇವಿಷ್ಣು (ಒ). 3 ನೊಂದೆಡೆಗಳೊಳಲರ್ಗಂಪು (ಓ). 4 ಯಮನಂ ಸುರುಚಿರರುಗ್ಮಿ (ಓ), ಯಮನಂಸುರಚಿರಬಾಣ (ಅ). 5 ಮಱು (ಅ). 6 ತಱು, ಕಱು (ಅ).

ಚಲಿಸುತ್ತುಮುಗಿಯೆ ಜಗತೀ
ವಿಲೋಚನಂ ಮೂಡಿದಂ ವಿಲೋಚನನಾಗಳ್ ‖ ೫೩೩

ಅವುಳ್ಗಳ್ [1]ನಯವಿಕ್ರಮಗುಣ[1]
ದವುಳ್ಗಳ್ ನೃಪಶಾಸ್ತ್ರಶಸ್ತ್ರಪರಿಣತ[2]ರವರಂ[2] ।
ಸಮರದೊಳುದಗ್ರಶೌರ್ಯಂ
[3]ಸಮರಸ[3]ಸಂಪನ್ನನಾವನುಬಿದಾಂಪನ್ನಂ ‖ ೫೩೪

ಮಂತಣಕಂ ಚದುರರ್ ಗಡ
ಮಂತಣಕಂ ನೆಗಡೆ ಬಂದರೆನಿಸಿರ್ದುಂ [4]ತಾಂ[4] ।
ಮಂತಣಮುಸಿರದೆ [5]ಕೆಲರಾ[5]
ಮಂತಣಮುಂಡಂತೆ ಪೆಱರ ನಯದೊಳೆ ತಣಿವರ್ ‖ ೫೩೫

ಈಧರೆಯ ಪೆಂಡಿರುದ್ಯೃಪ
ಯೋಧರೆಯ ಮನೋಜರಾಗರಸಪೂರಿತಬಿಂ ।
ಬಾಧರೆಯ ಕಂಬುಕಮ್ರಶಿ
ರೋಧರೆಯ ಬೆಡಂಗನಾರುಮೇನೆಯ್ದುವರೇ ‖ ೫೩೬

ಪನ್ನಗಕನ್ಯೆಯೊರ್ವಳುಪದೇಶಮನಿತ್ತಳೊ ನಾಗ[6]ಬಂಧಮಂ[6]
ಪನ್ನಗಕನ್ಯೆಯೋ ಜಿತೆಯೊ ಮೆಯ್ಯೆರಡಿಲ್ಲೆನಿಪಪ್ಪುಗಳ್ಗ ತ ।
ತ್ಪನ್ನಗಕನ್ಯೆಯಪ್ಪುಗಳೆ ಮುಪ್ಪುರಿಗೂಡಿದುವೆಂಬ ಮಾತು ಮೆ
ಲ್ಪನ್ನಗಕನ್ಯೆ[7]ಗಳ್ಪುಗು[7]ವಿವಕರ್ೂವಜರ್ ನಿನಗಾರೊ ನಲ್ಲರೇ ‖ ೫೩೭

ಪಾದಾದಿಯಮಕಕ್ಕೆ ‖

ಉಪದಾತ್ತನುತೋನ್ನತಮಂ
ದ್ವಿಪಮದಪರಿಪೂರ್ಣಗಿರಿಸರಿತ್ಸಂತತಿಯುಂ ।
ಉಪದಾತ್ತನುತೋನ್ನತಮಂ
ತಪನಕರೋತ್ತಪನತಪ್ತತಪನೋಪಲಮಂ ‖ ೫೩೮

ಮಧ್ಯಾಂತಯಮಕಕ್ಕೆ ‖

ನಾನಾಶಶಮೃಗ[8]ಧರಮಂ
ಸಾನುಜತರುಶಿಖರಲಗ್ನಶಶಮೃಗ[9]ಧರಮಂ[9] ।
ಪೀನಸರೋಜಾಲಯಮಂ
ವಾನೇಚರಯುವತಿಜಿತಸರೋಜಾಲಯಮಂ ‖ ೫೩೯

---

1 ನಯಗುಣವಿಕ್ರಮ (ಅ). 2 ರವರುಂ (ಓ.ಅ). 3 ಸಮರದ (ಅ) 4 ತಾ (ಅ). 5 ಕೆಲರುಂ (ಓ.ಅ.) 6 ಬಂಧದಾ (ಓ.ಮ). 7 ಪೆರ್ಚುಗು (ಅ). 8, 9 ಧರನುಂ (ಓ.ಮ).

ಅಂತ್ಯಯಮಕಕ್ಕೆ ॥

[1]ನಂದ ಸರ್ವಗತಂ[1] ಧರ್ಮ
ನಂದನಾಧ್ವರತೋಷಿತಂ ।
[2]ನಿಂದು ಯಾತ್ರೇಷ್ಟಿ[2]ಯೊಳ್ ಧರ್ಮ
ನಂದನಾಧ್ವರತೋಷಿತಂ ॥ ೩೪೦

ಅವ್ಯಪೇತಕ್ಕೆ ॥

ಸರಂ ಸರಂ ಕಂತುವ ಮನ್ಮಥಾಂಬುಜಾ
ಕರಂ ಕರಂ ನೋಡೆ ಮೊಗಂ ವಳಿತ್ರಯಾಂ ।
ತರಂ ತರಂಗಂ ಸ್ಮರಸಿಂಧುಗಾಲತಾಂ
ಕುರಂ ಕುರಂಗಾಕ್ಷಿಯ [3]ಕಣ್[3] ಮನೋಜನಾ ॥ ೩೪೧

ಸುರರಮಣೀರಮಣೀಯ
ಸ್ವರೂಪಮತಿತರಳತರಳವಿಲಸದ್ವಿದ್ಯುತ್ ।
ಸ್ಫುರಿತಮೆನೆ ಪೋಲ್ತು ಕರಗಿದು
ದರಗಿದು ದಹನೋಪತಪ್ತಮೆನೆ ತತ್ಕ್ಷಣದೊಳ್ ॥ ೩೪೨

ನಿನ್ನ ವಾಕ್ಯಾರ್ಥಮೆಂಬೊಂದು
ರನ್ನಕಂ ಬೆಗಡಂ ಗಡಂ ।
ತನ್ನುಕ್ತಿಯಾಗೆ ತ[4]ದ್ವಿದ್ಯ[4]
ನನ್ನನಾದಂ ಬಲಂ ಬಲಂ ॥ ೩೪೩

ವ್ಯಪೇತಾವ್ಯಪೇತಕ್ಕೆ ॥

ಸಬಳಿಕೆಯಿಂ [5]ಪಾಟಿ[5]ಯನೊ
ಕ್ಕು ಬೇರ[6]ನಂತಾ[6]ಕುಬೇರನಾಯಕನತಿವಿ ।
ಕ್ಲಬಚಿತ್ತಂ ತೊಟ್ಟಗೆ ತಾ
ಗಿ ಬಾಗಿದಂ ತಾಗಿ ಬಾಗಿದಂ ನರನಡಿಯೊಳ್ ॥ ೩೪೪

ವರ್ಣಾವೃತ್ತಿಯಮಕಕ್ಕೆ ॥

ಚಾರೂರೂ[7]ರೂದ್ಧರೂರೂ[7]ರುರು ಭುಜಶಿಖರೋದ್ಭಾಸಮಾನಾವಲೋಕಂ
ಕ್ರೂರಾರಾ[8]ರಾತ್ರಿ[8]ರಾ[9]ರಾಚಮುಪಡಿ[9]ನುಡಿಯುತ್ತುಂ ಮುರಧ್ವಂಸಿಯೊಳ್ ಸ ।
ದ್ಧಾರಾರಾರಾಜಿರಾರಾಜಿತಭುಜನೊಳವಷ್ಟಂಭದಿಂ ಚೆಲ್ವು ಕೆಯ್ಮೆ
ಕ್ಕಾರಾರಾಗಾಧ್ಯರಾರಾರವರವರವರ್ಗಂತೊಪ್ಪಿದಂ ನೀಲಕಂಠಂ ॥ ೩೪೫

---

1 ಸಂದನಗರ್ವಗತ (ಓ), ಸಂದಸರ್ವರತಂ (ಅ). 2 ನಿಂದುಯಾದೃಕ್ರಿಷ್ಟೆ (ಅ). 3 ಮೆಯ್ (ಓ.ಮ). 4 ದ್ವಿದ್ಯಾ (ಅ). 5 ಶಾಳಿ (ಓ.ಮ). 6 ದಂತಾ (ಓ.ಮ). 7 ರುದ್ವರೋರೂ (ಅ). 8 ರಾತ್ರಿ (ಅ). 9 ರೇರೇಚಮುಪಡಿ (ಅ), ಮ್ಮೈಚಾನನ ಪಟು (ಓ.ಮ).

## ಸೂತ್ರಂ ೧೨೪

* ಪರಿವೃತ್ತಂ ಸಂದಷ್ಟಂ
ನಿರಂತರಾವಳಿ ಸಮುದ್ಗಮೆಂಬಿವು ಮೊದಲಾ ।
ಗಿರೆ ಯಮಕಭೇದಮನಿತುಂ
ಪರಿಭಾವಿಸೆ ತತ್ಪ್ರಪಂಚದೊಳ್ ಪೊಕ್ಕಿರ್ಕುಂ ॥ ೩೪೬

ಉದಾಹರಣೆ ॥

ಪರಿವೃತ್ತಕ್ಕೆ ॥

ತಾರಾತಾರಾಮಳಿನಗುಳಿಕಾಹಾರನೀಹಾರನೀಕಾ
ಶೋರುಸ್ಫೂರ್ಜತ್ಪ್ರ[1]ವಿತತ[1]ಯಶೋರಂಜಿತಾಶೇಷ ಲೋಕಂ ।
ಸಾರಾಸಾರಾದ್ಯನುಗತವಿಚಾರೋಚಿತಾತ್ಮೀಯಚಿತ್ತೋ
ದಾರಪ್ರಜ್ಞಂ ನೆಗಳ್ದನವನೀಭಾಗದೊಳ್ ನಾಗವರ್ಮಂ ॥ ೩೪೭

ಸಂದಷ್ಟಕ್ಕೆ ॥

ಓರೊರ್ವರ್ ಸೆಣಸಿ ತಗುಳ್ದನೇಕವಾರಂ
ವಾರಸ್ತ್ರೀಜನಮಿದಿರೊಳ್ ತುಳುಂಕೆ ನೀರಂ ।
ನೀರಂಧ್ರಸ್ತನತಟದೊಳ್ ಕೃತೋಪಹಾರಂ
ಹಾರಶ್ರೀಗೆಣೆಯೆನಿಸಿತ್ತು ವಾಃಕಣೌಘಂ ॥ ೩೪೮

ಆವಳಿಗೆ ॥

ಶ್ರೇಯಂ ಶ್ರೇಯಂ [2]ದ್ವಿಷದ[2]ವ
ಸಾಯಕಸಾಯಕಪರಂಪರಂ ಲಲಿತಯುವ ।
ತ್ಯಾಯತನತ್ಯಾಯತನಂ
ಗೇಯೋದ್ಗಾಯತ್ಸಕಳಕಳಂ ಸಕಳಕಳಂ ॥ ೩೪೯

ಸಮುದ್ಗಕ್ಕೆ ॥

[3]ಹರಿದಾಂತಂ[3] ಬಲಂ ಬೆರ್ಚೆ
ಸುರಾಸುರಸಭಾಜನಂ ।
[3]ಹರಿದಾಂತಂ[3] ಬಲಂ ಬೆರ್ಚೆ
ಸುರಾಸುರಸಭಾಜನಂ ॥ ೩೫೦

---

* ಭಾಮಹ—II, 10 ; ರುದ್ರಟ—III, 13 ರಿಂದ 16 ಪದ್ಯಗಳನ್ನು ನೋಡಿ. ದಂಡಿ—III, 51ನ್ನು ನೋಡಿ. 1 ಕಟಿತ (ಅ). 2 ದ್ವಿಪವ (ಅ). 3 ಹರಿದಾಂತ (ಅ).

## ಸೂತ್ರಂ ೧೩೦

ಬವಕಾರಂಗಳ್ ಪಹವ
ರ್ಣವೆರಡುಮವಿಭೇದದಿಂದೆ ಸಲ್ಗುಂ ಸಂಯೋ ।
ಗವಿಶಿಷ್ಟಮುಂ ಸ್ವರೂಪ[1]ಮು
ಮವಿಕಲ್ಪ[1]ದೊಳೊಂದಿ [2]ನೆಗಟ್ಗುಮವು[2] ದುಷ್ಕರದೊಳ್ ॥

* ಲಕ್ಷ್ಯಂ ॥

ನವ[3]ಲಕ್ಕಂ[3] ಕಟಕದೊಳಿ
ನ್ನವ[3]ಲಕ್ಕಂ[3] [4]ನಿಜಮೆ[4] [5]ಪಿರಿದು[5] ವಿಬುಧನಿಕಾಯ ।
[6]ಕ್ಕವಳಂಬನಮಪ್ಪ . .
ಕ್ಕವಳಂ ಬಚ[6]ನ್ನೈಕಸಾರವೆಂಬೀ ನುಡಿಯಂ ॥ ೫೫೨

ಪಿಂಗಿದುದಿಲ್ಲಿನ್ನುಂ ಮನ
ದಿಂ ಗೋವರ ಗಡಣದೊಳ್ ದನಂಗಾಹಿತನಂ ।
ನೀಂಗಳದೆತ್ತ ಱುವಿರ್ ಬ
ರ್ಮಂಗಂ ಬಗೆದಱುವುದರಿದನಂಗಾಹಿತನಂ ॥ ೫೫೩

ಆ ಗಿರಿಯ ನಿತಂಬಂ ಶೋ
ಭಾಗುಣಮಂ ತಳೆದುದಪ್ಸರಃಕುಲಲಲಿತಂ ।
ಮೇಗಣ ಶಿಖರಾಗ್ರ[7]ಮುಮಿಂ[7]
ಬಾಗಿ ಮನಕ್ಕೆಸೆವುದಪ್ಸರಃಕುಲಲಲಿತಂ ॥ ೫೫೪

## ಸೂತ್ರಂ ೧೩೧

† ಸದೃಶಾಕ್ಷರವಿನ್ಯಾಸಂ
ಪದದೊಳ್ ಪಾದಂಗಳೊಳ್ ಪೊದಳ್ದೆಸೆದಿರೆ ಪೇ ।
ಳ್ವುದನುಪ್ರಾಸಂ ನಿಯಮದಿ
ನದನಾದ್ಯಂತಂ ವಿಭಾಷೆಯಿಂ ವಿರಚಿಸು[8]ವೆಂ[8] ॥ ೫೫೫

---

1 ಸ್ವಪಿಕಲ್ಪ (ಓ.ಅ). 2 ನೆಗಟ್ಟುವು (ಓ.ಮ). * ಲಕ್ಷ್ಯಂ ಎಂಬುದಕ್ಕೆ ಹಿಂದೆ "ಈ ಕಾರಾರ್ಥವ್ಯಾವೃತ್ತಿಗ್ರಹಣಮಾದರ್ಕಂ" ಎಂದು ಓಲೆಪ್ರತಿಯಲ್ಲಿದೆ. ಕೆಲವು ಪ್ರತಿಗಳಲ್ಲಿ "ಈ ಕಾರಿಕಾರ್ಥತ್ವವ್ಯಾವೃತ್ತಿಗ್ರಹಣಮಾದರ್ಕೆ" ಎಂದಿದೆ. 3 ಲಕ್ಷ್ಯಂ (ಓ.ಅ). 4 ಜನಮೆ (ಓ.ಅ). 5 ತರಿದು (ಅ). 6 ಕ್ಕವಳವ್ಯುಮನರ್ಕವಳಂಬವಚ (ಓ), ಕ್ಕವಳಂಬನಮಪ್ಪದರಿತ್ತವಳಂವಚ (ಅ). 7 ಮಸಿಂ (ಓ.ಮ). † ಭಾಮಹ—II, 5; ದಂಡಿ—I 55 ನೋಡಿ. 8 ವರ್ (ಅ.ಇ).

ಪ್ರಯೋಗಂ ॥

ಚರ್ಚರಲ್ ಶಶಿಶಿಶುವಂ ಕಱಿ
ಗರ್ಚರಲ್ ಘನಘಟೆಯನುರ್ಚಲವುರದುದ್ರುಮವುಂ ।
ಸಾರ್ಚಲಿನನೆಂಬ ಸೊಡರನೊ
ಡರ್ಚಿದುವೆನೆ [1]ನೀಳ್ದುವಿದಱ[1] ಶಿಖರಕರಂಗಳ್ ॥ ೫೫೬

ಸೋಡಂಬಾಡಂ ಕರಿಯ ಮುಗಿಲಂ ದಂತಿಗಳ್ ತು ಮಿಂಚಂ
ನೋಡಲ್ ನೀಡುಂ ಪೊಳೆವ ನಿಶಿತಾಸ್ತ್ರಾಳಿಗೆತ್ತೆತ್ತ[2]ಮೆತ್ತಂ[2] ।
ಕಾಡುಂ ಕೋಡುಂ ಹಯಮಯಮೆಗೆತ್ತುದ್ಧ[3]ಗೇಹಂ[3]ಗಳೊಳ್ ಸಂ
ವ್ರೀಡಾಪೀಡಂ ವಿರಹಿಜನಮಂದಳ್ಕಿ ಬೆಳ್ಕುತ್ತುದೆತ್ತಂ ॥ ೫೫೭

ಕೆಳರೆ ವಿರಹಿವ್ಯಂದಂ ಪುಷ್ಪಿತಾಶೋಕದಿಂದಂ
[4]ತಳರೆ[4] ಕುಸುಮಜಾಳಂ ಬಾಳಚೂತಪ್ರವಾಳಂ ।
ಪೊಳೆಯೆ ಪುಟಿಲ ತಣ್ಪಂ ನೋಳ್ಪಿ ತಟ್ಕೈಸಿ ಬಿಣ್ಪಂ
ಬಳೆಯೆ ಮದನದಾಹಂ ಬೀಸುಗುಂ ಗಂಧವಾಹಂ ॥ ೫೫೮

ಖಗ[5]ತತಿ[5] ಸಾರೆ [6]ಶಾಕಿನಿ[6]ಯರಾರೆ ನಿಶಾಚರಕೋಟಿ ಪಾರೆ ಬ
ಳ್ಳುಗಳೆಡೆಯಾಡೆ ಭೂತಗಣ[7]ಮಾಡೆ[7] ಮರುಳ್ವಡೆ ಪಾಡೆ ಸಾಹಸಂ ।
ನೆಗಟ್ದು ಮುಕುಂದನಸ್ತ್ರರಿಪುವ್ಯಂದ [8]ನಗು[8] ರ್ವಿಸೆ ಕೊಂದನಾಜಿಗ
ಟ್ಟಿಗನೆನೆ ಚಕ್ರವರ್ತಿಯನನಿಂದಿತಕೀರ್ತಿಯನಿಂದ್ರಮೂರ್ತಿಯಂ ॥ ೫೫೯

## ಸೂತ್ರಂ ೧೩೨

* ಬೆರಸಿರೆ [9]ಶಷಸಹವರ್ಣಂ[9]
ಸರೇಫಸಂಯೋಗಮೊಂದಿ ಕೂಡಿ[10]ದ ವರ್ಗಾ[10] ।
ಕ್ಷರಮಲ್ಲಿಗಲ್ಲಿಗೆಡೆಗೊಂ
ಡಿರೆ [11]ಪರುಷಾ[11]ನಾಮವೃತ್ತಿ ವರ್ತಿಕುಮದಱೊಳ್ ॥

ಲಕ್ಷ್ಯಂ ॥

ಶಿಖಿಬರ್ಹಂ ಸರ್ಷಪಮಾ
ಜಖುರಂ ರಾಮಠಮಹೀಂದ್ರನಿರ್ಮೋಕಂ ಶ್ವೇ ।
ತಖರಾಂಗರೋಮಮಿವು ದು
ರ್ಮುಖದುಷ್ಟಗ್ರಹವಿನಾಶನಂ ಕಟುಧೂಪಂ ॥ ೫೬೧

---

1 ನೀಳ್ದವದಱ (ಓ.ಅ). 2 ಲತ್ತಂ (ಅ). 3 ವಾಹಂ. 4 ಕಳಲ (ಅ). 5 ರಾತಿ (ಓ.ಮ). 6 ಡಾಕಿನಿ (ಅ). 7 ಕೂಡೆ (ಓ) 8 ಮಗು (ಅ). * ಮುಂದಿನ ಪುಟವನ್ನು ನೋಡಿ. 9 ಶಷವರ್ಣಂಗಳ್ (ಓ.ಮ) 10 ಯವರ್ಗಾ (ಓ.ಮ). 11 ಪುರುಷಾ (ಅ.ಮ).

## ಸೂತ್ರಂ ೧೩೩

* ತಂತಮ್ಮ ವರ್ಗದಂತ್ಯದೊ
ಳಂತಾ ವರ್ಗಂಗಳಮಳ್ಗಳಾಗಿರೆ ಮೇಣ ।
ತ್ಯಂ[1]ತಂ ಸರೇಫ[1]ಸಂಯೋ
ಗಾಂತರಮಮರ್ದೊದವೆ ಮಧುರೆಯೆಂಬುದದಕ್ಕುಂ ॥

ಉದಾಹರಣೆ ॥

† ಒಸಗೆ ಮರುಳ್ಗೊಂಡಾಡುವ
ವಸುಧಾಧಿಪನಂತಪುರದ ಕಾಂತೆಯರ ಸಮು ।
ಲ್ಲಸಿತಪದಕಮಲದೊಳ್ ರಂ
ಜಿಸಿ[2]ದುದು[2] ಸಿಂಜಾನಮಂಜುಮಂಜೀರರವಂ ॥ ೫೬೩

ಉಪನಾಗರಿಕೆಯೆಂದೊಡಮಿದುವೆ ॥

## ಸೂತ್ರಂ ೧೩೪

ಅವಿಶೇಷವರ್ಣರಚನಾ
ವಿವಿಕ್ತಗತಿ ಮುಕ್ತಭೂರಿಸಂಯೋಗಂ ಸೌ ।
ಷ್ಠವಗುಣಸಮನ್ವಿತಂ ಲಲಿ
ತವೃತ್ತಿಯಿಂ [3]ಲಲಿತೆಯೆಂಬ ವೃತ್ತಿಯದಕ್ಕುಂ[3] ॥ ೫೬೪

ಪ್ರಯೋಗಂ ॥

ಮದನನೃಪಾದೇಶದಿನ
ಲ್ಲದೆ ಬಿರಯಿಗಳುಂತೆ ಪೋ ಪುಗಲ್ ಪುಗಲೆಂಬಂ ।
ತೊದವಿದುದು ಬನದೊಳೆತ್ತಂ
ಮದಕಳಕಳಕಂಠಕಳಕಳಪ್ರಧ್ವಾನಂ ॥ ೫೬೫

ಗ್ರಾಮ್ಯೆಯೆಂಬುದು ಮಿದುವೆ ॥

---

* ರುದ್ರಟ—II, 26 : ಅನುಪ್ರಾಸದಲ್ಲಿ ಐದು ಭೇದಗಳುಂಟೆಂದು ರುದ್ರಟನ ಮತ. ಕೆಲವರು ಗ್ರಾಮ್ಯ, ಉಪನಾಗರಿಕೆ ಎಂಬ ಬೇರೆ ವೃತ್ತಿಗಳೂ ಉಂಟೆಂದು ಹೇಳುತ್ತಾರೆ. ಕಾವ್ಯಾಲಂಕಾರ—II, 19, ನಮಿಸಾಧುವಿನ ಟಿಪ್ಪಣಿಯನ್ನೂ ನೋಡಿ. ನಾಗವರ್ಮನು ರುದ್ರಟನ ಮತವನ್ನೇ ಒಪ್ಪಿರುತ್ತಾನೆ. 1 ತಸ್ವರೂಪ (ಅ.ಇ). † ರುದ್ರಟ—II, 20, 23. 2 ದುದೊ (ಅ). 3 ಲಲಿತವೃತ್ತಿಯೆಂಬುದದಕ್ಕುಂ (ಓ).

## ಸೂತ್ರಂ ೧೩೫

[1]ಸ್ಥಾನಂ[1] ಕ್ರಿಯೆಯೆಂಬಿವಱೊಳ
ನೂನಸಮಾನಾಕ್ಷರಾದಿಪದಸಾನ್ನಿಧ್ಯಂ ।
ತಾನಕ್ಕುಂ ಮಾಧುರ್ಯಾ
ಧೀನಮನುಪ್ರಾಸಮೆಂದು ಪೇೞ್ವರ್ ಕೆಲಬರ್ ॥ ೫೬೬

ಲಕ್ಷ್ಯಂ ॥

ಎಳಲತೆಯ ಜೊಂಪ[2]ದೊಳ್ ತ
ಳ್ತೆಳಸಿ[2] ತಗುಳ್ದಿರ್ಪ ವಿರಹಕಾತರದಿಂ ಕ ।
ಣ್ಗೊಳಿಸುಗು[3]ಮೀ ಪುರವರಮಂ[3]
ಬಳಸಿದ ನಂದನವನಂಗಳೆನಿತೊಳವನಿತುಂ ॥ ೫೬೭

## ಸೂತ್ರಂ ೧೩೬

* ಏನಾನುಮನೊಂದಂ ಸಂ
ಸ್ಥಾನದಿನನುಕರಿಸುವಂತು ಭಂಗ್ಯಂತರದಿಂ ।
ಪೀನವೊಡಂಬಡೆ ವಿರಚಿಸೆ
ನಾನಾವಿಚ್ಛಿತ್ತಿ ಚಿತ್ರಮೆನಿಕುಂ ಪೆಸರಿಂ ॥ ೫೬೮

## ಸೂತ್ರಂ ೧೩೭

ಶರಶೂಲಚಾಪಚಕ್ರಾ
ಸಿರೂಪಮಿಭರಥತುರಂಗಪದಗತಪಾಠಂ ।
ಮುರಜಂ ಗೋಮೂತ್ರಿಕೆ ಪು
ಷ್ಕರಮರ್ಧಭ್ರಮಣಸರ್ವತೋಭದ್ರಂಗಳ್ ॥ ೫೬೯

## ಸೂತ್ರಂ ೧೩೮

ಅಕ್ಷರಬಿಂದುಚ್ಯುತ[4]ಕಂ
ದ್ವ್ಯಕ್ಷರಿಯೇಕಾಕ್ಷರಂ[4] ನಿರೋಷ್ಠ್ಯಮತಾಲ ।

---

1 ಸ್ಥಾನ (ಅ). 2 ದೊಳಗುಳ್ಳೆಳಸಿ (ಓ.ಅ). 3 ನೂಪುರರವಮಂ (ಓ).
* ರುದ್ರಟ—V, 1. 4 ಸಂಧ್ಯಕ್ಷರಮೇಕಾಕ್ಷರಂ (ಓ.ಅ).

ವ್ಯಾಕ್ಷರಮೆನೆ ನಿಜನಾಮಸ
ದೃಕ್ಷಂ ಲಕ್ಷಣಮದಾಗೆ ನೆಗಟ್ದ್ಗಂ ಪಲವುಂ ‖ ೫೭೦

ಅವರ್ಕನುಕ್ರಮಪ್ರಯೋಗಂ ‖

ಶರಂ ‖

ಸುಂದರಾಕಾರಸಂಪನ್ನ
ನೆಂದುಮಾನ್ನಪನಂದನಂ ।
ನಂದನಂಬುಧಕೀರಾಳಿ
ವೃಂದಕ್ಕಕ್ಷಸಕಲರ್ತುಕಂ ‖ ೫೭೧

ಶೂಲಂ ‖

ವೀರಶ್ರೀಕಾಂತೆಯುಂ [1]ತಾಳೆ[1]
ಚರಾಚರಜನಸ್ತುತಾ ।
ತಾರತಾತಾರತಾರೇಶ
[2]ಶರೇತಾರಾಜಿತಾಜಿರಾ[2] ‖ ೫೭೨

ಚಾಪಂ ‖

ಸಂಸಾರವಿಷಮವಾರಿಧಿ
[3]ಸಂಸರ್ಪಣದುಃಖವೀಚಿಯೊ[ಂದು] ಲ್ಲಾಸಂ[3] ।
ಸಂಸಕ್ತಮಾಗದಂತು ಜಿ
ನಂ ಸುವ್ರತ[4]ನಾಮ[4]ನೆಮಗೆ ಕರುಣಿಸು[5]ಗಿನಿಸಂ[5] ‖ ೫೭೩

ಚಕ್ರಂ ‖

ತನ್ನ ಸಂತತಿ ಮುನ್ನೀತಂ
[6]ತನ್ನೀತಂ[6] ಮುನಿಸನ್ನುತಂ ।
ತನ್ನನುರ್ಕಿನೊಳಿನ್ನಾತಂ
ತನ್ನೊಳಿಂದಿನಿ[7]ಸನ್ನತಂ[7] ‖ ೫೭೪

ಖಡ್ಗಂ ‖

ಕಂಸಾಸುರಹರಂ ದೈತ್ಯ
ಧ್ವಂಸಿ ಬಾಣಮದಾಪಹಂ ।
ಹಂಸಾಸನಸಮಾರಬ್ಧಾ
ಶಂಸನಂ ನರಕಾಂತಕಂ ‖ ೫೭೫

---

1 ನಾಳೆ (ಓ.ಅ). 2 ಶರೀರಾಜಿತರಾಜಿತಾ (ಓ), ಶರತಾರಾಜಿರಾಜಿತ (ಅ). 3 ಸಂಸರ್ಪದುಷ್ಪನಿಭಂನಿಭಂ ಎಲ್ಲಾ (ಓ). 4 ನಾಥ (ಅ.ಓ). 5 ಗೆನಸುಂ (ಅ). 6 ಮುನ್ನೀತಂ (ಅ). 7 ಸನ್ನುತಂ (ಅ).

ಕಂಜನಾಥಂ ಸುರದ್ರೋಹಿ
ಭಂಜನಂ ಲೋಕಪಾಲಕಂ ।
ಕಂಜಾಕ್ಷಂ ಕಂಟಕಾಕಂಪಂ
ಮುಂಜಕೇಶಿ ಧರಾಧರಂ ॥ ೫೭೬

ವ॥ ಗ ರಥತುರಂಗಪದಗತಪಾತಂಗಳ್ಗಂ ಲಕ್ಷ್ಯಮಂ ನೋಡಿಕೊಳ್ವುದು ॥

ಮುರಜಂ ॥

ಅಜಾತಶಂಖಂ ತಾನಾಪ್ತ
ನಜಂಗಮನಸೂಯನಂ ।
ಗಜಾಂಕುಶಂ ಗತಾಪ್ರಾಪ್ತ
ವಿಜಯಂ ಮಧುಸೂದನಂ ॥ ೫೭೭

ವ॥ ಮುರಜಂ ಅರ್ಧಪ್ರಸ್ತಾರದಿಂ ಗೋಮೂತ್ರಿಕೆಯಕ್ಕುಂ ॥

ಗೋಮೂತ್ರಿಕೆ ॥

ಉರುತರಸಿತಕೀರ್ತಿಗುಣಾ
ಕರಂ ಪದಾನತವಿರೋಧಿವರ್ಗಂ ನೆಗಳ್ದಂ ।
ಸುರುಚಿರ[1]ನುತ[1]ಮೂರ್ತಿಘೃಣಾ
ಪರಂ ಸದಾ ಹಿತಕರೋಕ್ತಿ ದುರ್ಗಂ ಜಗದೊಳ್ ॥ ೫೭೮

ಪದ್ಮಂ ॥

ಮಂದರಾಗಂ[2] ಗುಣೋದ್ದಾಮಂ
ವಂದಿತಂ[3]ಸದಯಾದಮಂ[3] ।
ಮಂದರಾದ್ರಿನಿಭಂ ಭೀಮಂ
[4]ಮಂದಿ[4]ಯೊಳ್ ಪೇೞ್ಗುಮಾಯಮಂ ॥ ೫೭೯

ಅರ್ಧಭ್ರಮಣಂ ॥

ಶ್ರೀರಾಮಾಧಾಮನಾಮಂ [5]ತಾ[5]
ರಾರಾರಾರಾಸಮಾಸಮಂ ।
ಮಾರಾರಿ ನಿನ್ನೊಳ್ ಸಮಾನಾ
ಧಾರಾ [6]ನಿನ್ನೂತ[6]ನೊಳ್ ಸಮಂ ॥ ೫೮೦

* ಸರ್ವತೋಭದ್ರಕಂ ಲಕ್ಷ್ಯಮನಱಿದುಕೊಳ್ವುದು ॥

---

1 ತನು (ಓ.ಮು). 2 ಮಂಧಾರಾಗಂ, ಮಂದಾರಾಂಗಂ, ಮಂದಾರಗಂ (ಅ). 3 ಸ್ಕಂದಯಾರಮಂ, ಸ್ಕಂದಯಾಪರಂ, ಸಂದಯಾದಮಂ (ಅ). 4 ಮಂಡೆ (ಅ). 5 ತಾಂ (ಅ). 6 ನಿನ್ನೋತ (ಅ). * ಇದಕ್ಕೆ ಹಿಂದೆ ಕುಸುಮಮನೋಹರಂ । ಕುಸುಮಮನೋಹರಂ । ಕುಸುಮಮನೋಹರಂ । ಕುಸುಮಮನೋಹರಂ ॥—ಎಂದು ಕೆಲವು ಪ್ರತಿಗಳಲ್ಲಿ ಬರೆದಿದೆ.

ಅಕ್ಷರ[1]ಚ್ಯುತಕಂ ||

ಕುಲಜನಭಿಮಾನಿ ತಕ್ಕಂ
ಚಲಮೞಿವಂ ನೆಗೞನಾತನಿಂತಿದನೆಂತುಂ |
ಜಲಜಾಯತಾಕ್ಷಿ ಕೆಲನುಂ
ನೆಲನುಂ ನಗುವಂತು ಪೊಲ್ಲ[2]ಕೆಯ್ಯುಗ್ಗಮೆ ಚಾರಂ[2] || ೫೮೧

ಬಿಂದುಚ್ಯುತಕಂ ||

ಇಂದು ನೋಡಿದು ಬೇೞಿಂದ
ಮೆಂದಿನಂದಮುದಲ್ತಣಂ |
ಮಂದಮಂದಂ ಕರಸ್ಪರ್ಶಂ
ತಂದಪ್ಪುದುಪತಾಪಮಂ || ೫೮೨

ದ್ವ್ಯಕ್ಷರಿ ||

ನಿಂದಾನಂದದದೊಂದೂನಂ
ನಿಂದಂದೇನಿಂದಿನಂದದಿಂ |
ನಂದನಂದನ ನಿನ್ನಿಂದಂ
[3]ನಂದನುಂ[3] ದನುನಂದನಂ || ೫೮೩

ಏಕಾಕ್ಷರಂ ||

* ನಿನ್ನಿನೇನಿನ್ನನಾನನ್ನ
ನಿನ್ನನೆನ್ನನನೂನನಂ |
ನುನ್ನನ್ನೈನನ್ನನ್ನೈನೇನೇ
[4]ನೆನ್ನಿನ್ನಂ[4]ನಿನ್ನೆನಾನುನಂ || ೫೮೪

ನಿರೋಷ್ಠ್ಯಂ ||

ನೆಗೞೆ[5]ಯುತಿ[5]ಸ್ಥಿತಿ ಚಿತ್ತದಿ
ನಗಲೆ ಕರಂ ನಿಜದೆ ತನ್ನ [6]ತರಳತೆ[6] ಕೆಲದಿಂ |
ದಗಲದೆ ನಾಳೀಜಂಘಂ
ನಗಿಸಿತ್ತಾನಗದ ನಗದ ಋಷಿ[7]ಸಂಹತಿಯಂ[7] || ೫೮೫

---

1 ಚ್ಯುತಕಾದಿಗಳ್ಗೆ (ಓ). 2 ಕೆಯ್ಯುದ್ಧಮೆಚೋರಂ (ಅ.ಇ), ಕೆಯ್ಯುಗ್ಗಂಚಾರಂ (ಅ). 3 ನಂದಸಂ, ನಂದನೆಂ (ಅ). * ಇದಕ್ಕೆ ಹಿಂದೆ ಒಂದು ಪ್ರತಿಯಲ್ಲಿ ಮಾತ್ರ "ನೀನಾನು ನಿನ್ನನಾನೆಂ | ನಾನಿಂನನ್ನಿನ್ನ ನಿನ್ನನಓನಾನೂನಂ | ನೂನಂನನ್ನನನೋನ್ನೈ | ನೀನೇನೈನಾನುನೀನುನೀನೇನೋನ್ನೈ" ಎಂದು ಇದೆ. 4 ನೇನಿನ್ನಂ (ಅ). 5 ಯುತಿ (ಅ). 6 ಸರಳತೆ (ಅ). 7 ಸಂತತಿಯಂ (ಅ).

ಅತಾಲವ್ಯಂ ||

ರೂಪುಂ ಸೊಬಗುಂ ಮೆಯ್ಮೆಂ ನಾ
ಣ್ಗಾಪುಮಾರ್ಪುಂ ಪ್ರಭುತ್ವಮುಂ |
[1]ಕೋಪಮಂ[1] ಮಾಱ್ಪುದುಂ ತನ್ನೊಳ್
ಭೂಪಂ ತಾಂ ಕೊಳ್ಗುಮಾತನಂ || ೫೮೬

## ಸೂತ್ರಂ ೧೩೯

ಚ್ಯುತದತ್ತಾಕ್ಷರಮುಂ ಗೋ
ಪಿತಕ್ರಿಯಾಕಾರಕಂ ನಿಗೂಢಚತುರ್ಥಂ |
ಪ್ರತಿನಿಯತಗತಪ್ರತ್ಯಾ
ಗತಂ ದಲೆಂದಿಂತು ಪೆಱವುಮಕ್ಕುಂ ಚಿತ್ರಂ || ೫೮೭

ಪ್ರಯೋಗಂ ||

ಚ್ಯುತದತ್ತಾಕ್ಷರಂ ||

ಸೀತಾರಾಮಸಮೀಪಸ್ಥಂ
ಧೌತ[2]ಶೀಲ[2]ಸಿತಪ್ರಭಂ |
ವೀತತ್ರಾಸಂ ಮನಂಗೊಳ್ಗುಂ
ಪ್ರೀತಿಯಿಂದೊಂದಿ [3]ಲಕ್ಷಣಂ[3] || ೫೮೮

ಕ್ರಿಯಾಕಾರಕಗೋಪಂಗಳ್ ||

ಪರಿವರ್ಜಿತದೋಷನನಾ
ದರದಿಂ ದೇವಾದಿದೇವ[4]ನೆಂದಿರ[4]ದರೆಬರ್ |
ದುರಘಾವಿಲಿಪ್ತರಂ ದೇ
ವರೆಂದು ಬಗೆ ಬೆದಱಿ ದೆಸೆಗೆ ದಿಙ್ಮೋಢತೆಯಿಂ || ೫೮೯

ಏನನೇನಂ ಮಹಾಘೋರಂ
ನಾನಾಜನ್ಮಾಂತರಂಗಳೊಳ್ |
ತಾನಾಗಿಸದು ಸಂಸಾರಿ
ಗಾ ನಿರ್ವಾಣಪದಂ ಬರಂ || ೫೯೦

ಗೂಢಚತುರ್ಥಂ ||

ಆತನಲ್ಲದನಂ ಮೆಚ್ಚಿಂ
ಮಾತೇಂ ತಾಂ ಮಾರನಾದೊಡಂ |
ಕೇತನಂ ರತಿರಾಗಕ್ಕೆ
ಕೇತನಂ ತಾರ [5]ನಲ್ಲನಂ[5] || ೫೯೧

---

1 ಕೋಪಮುಂ. 2 ಶೀಲಂ (ಅ). 3 ಲಕ್ಷ್ಮಣಂ (ಓ,ಅ). 4 ನೆಂದಿಂ (ಅ). 5 ನಲ್ಲಳಂ (ಓ).

ಗತಪ್ರತ್ಯಾಗತಂ ||

* ತಾರವೀವೀರತಾಸಾರ
ನೀರಸಾಕಾರನಾರಕಾ |
ತಾರನಾನಾರತಾಕಾರ
ಕಾರಕಾತಾರಕಾರತಾ || ೫೯೨

## ಸೂತ್ರಂ ೧೪೦

† ಸುಕವಿಪ್ರಕರಕ್ಕೆ ವಿನೋ
ದಕೇಳಿಗುಪಯೋಗಹೇತುಗಳ್ ಪ್ರಚ್ಛನ್ನ |
ಪ್ರಕಟಾರ್ಥಂಗಳನೇಕ
ಪ್ರಕಾರದಿಂದೊಂದಿ ವರ್ತಿಕುಂ ಪೇಳಿಕೆಗಳ್ || ೫೯೩

## ಸೂತ್ರಂ ೧೪೧

ನುಸುಳೊರ್ನುಡಿ [1]ಭಾಮೆ ಮನ[1]
ಕ್ಕೆಸೆವಸ್ಪಷ್ಟಾರ್ಥಮುಱಿವು ನಾಮಾಂತರಿತಂ |
ಕುಸುರಿಯ ನುಡಿಯೆಂಬಿವು ಭಾ
ವಿಸೆ ಪೇಳಿಕೆಗಳೊಳೆ ಪೇೞ್ವ ಭೇದಮವಕ್ಕುಂ || ೫೯೪

ಲಕ್ಷ್ಯಂ ||

ನುಸುಳ್ಗೆ ||

ತಿರಿವುದು ಬ್ಯೆಕಂಗೊಳ್ಳದು
ಮೊರೆವುದು ಮಱಿದುಂಬಿಯಲ್ತು ಕತ್ತರಿ[2]ಗಾಳಂ[2] |
[3]ಬೆರಸಿ[3] [4]ತನುಗೊಂದಿ[4] ದೊರೆಕೊಂ
ಡಿರೆಯುಂ ಕೆನೆಱಂಕಮಲ್ಲದಾವುದೊ ಪೇೞಂ || ೫೯೫

ಒರ್ನುಡಿಗೆ ||

[5]ಒಂದು[5] ಗಟಿಗೆಯೊಳೆ ಸಂಪುಟ
ದಂದದೆ ಮಡಿದಿರ್ಪರ್ಅರಹಿತರೆರೆದ ನರಕೋರ್ಂ |
ಡೊಂದಱೊಳೆ ಮೆಱೆದು ಗಣಪತಿ
ಯಂದದಿನೊಸೆದಿರ್ಪರ್ರಿದಿರ್ಗೆ [6]ವಂದಿಂದಿರನಾ[6] || ೫೯೬

---

* ಈ ಶ್ಲೋಕದಲ್ಲಿ ತಪ್ಪುಬಿದ್ದಿರುವಹಾಗಿದೆ. ಓಲೆಯ ಪ್ರತಿಯಲ್ಲಿ ಈ ಶ್ಲೋಕವೇ ಇಲ್ಲ. † ದಂಡಿ-III, 97. 1 ಭಾಷ್ಯಮಾನ (ಅ). 2 ಘಾಯಿಂ (ಅ.ಓ). 3 ಬೆರಸು (ಅ). 4 ತನಗೊಂದಿ, ತವುಗೊಂದಿ (ಅ). 5 ಒಂದೆ (ಅ). 6 ವಂದಿಂದಿರನೊಳ್ (ಅ).

**ಛಾಮೆಗೆ ॥**

ಈನವೀನ[1]ಸಿತಾಂ[1]ಭೋಜಾ
ನೂನಪೀತಾವತಂಸಕಂ ।
ತಾನದೇವುದೊ [2]ಕರ್ಣಾಂತ
ವ್ಯಾನತಾ[2]ಯತಲೋಚನೇ ॥ ೫೯೭

**ಅಸ್ಪಷ್ಟಾರ್ಥಕ್ಕೆ ॥**

ದಂಡಿತಾರಾತಿಭೂಭೃ
ತ್ಕಾಂಡಂ ಮೆಚ್ಚಿದಂ [3]ಕರಂ[3] ।
ಗಾಂಡೀವ[4]ಧನ್ವಂ[4] ಮುಂದೆ
ಕಂಡಂ ಭಯಾಕರಮಮಂ ॥ ೫೯೮

**ಉಟಿವಿಂಗೆ ॥**

ಉಮೆಗೆ ಮಹೀಜೆಗೆ [5]ಸುಮನೋ[5]
ರಮಣೀ[ಮಣಿ]ನಚ್ಚಿನಾತಿಳೋತ್ತಮೆಗೊಳ್ಪಿಂ ।
ಸಮನೆನಿಸುವ ಮಂದಾಕಿನಿ
ಯಮುನಾನದಿಸಿಂಧುಸಂಕರಂ ಕಣ್ಗೆಸೆಗುಂ ॥ ೫೯೯

**ನಾಮಾಂತರಿತಕ್ಕೆ ॥**

ಮೊದಲೊಳೆ ವಿಕಾರಿ ನಾಕಾ
ರದರ್ಶನೀಯಂ ವಿರಾಮದೊಳ್ ಸಾಯಕಮಂ ।
ತದು ತಾಂ ವಿನಿಂದ್ಯಮಲ್ತಾ
ದಿದೇವಪುತ್ರಂ ಸದಾನವಾರಿಪ್ರಮುಖಂ ॥ ೬೦೦

* ಕುಸುರಿಮೊದಲಾದ ಪ್ರಶ್ನೋತ್ತರಪ್ರಕಾರಂಗಳ್ಗಮಿಲ್ಲಿ ಪ್ರಯೋಗಮಂ ಕಂಡು ಕೊಳ್ವುದು.

## ಸೂತ್ರಂ ೧೪೨

* [6]ನುಡಿದುದದೆ[6] [7]ಪದವಿಭಂಗತೆ
ಗೊಡಂಬಡಂ[7] ಪಡೆಯೆ ಮಗುಟ್ದುಮರ್ಥಾಂತರದೊಳ್ ।
ತೊಡರ್ದು ನಿಲೆ ನುಡಿವ ನುಡಿ ಚೆ
ಲ್ವೊಡರಿಪ ವಕ್ರೋಕ್ತಿ ನಿಯತಕಾಕುಶ್ಲೇಷಂ ॥ ೬೦೧

---

1 ರಸಾಂ (ಓ). 2 ಕರ್ಣಾಸದ್ವ್ಯಾನತಾ (ಅ). 3 ನರಂ (ಅ). 4 ಧನ್ವನಂ, ಧನ್ವತಂ, ಧನ್ವಂತಾ, ಧನ್ವ‹ತ (ಅ). 5 ಮಣಿಘಂಗೆ (ಓ), ಮಣಿಯಿಗೆರಮಣಿನಚ್ಚಿನಾ (ಅ), * ದಂಡಿ—III, 125 ; ರುದ್ರಟ—II, 13. 6 ನುಡಿದುದನೆ (ಓ), ನುಡಿದುದೆನೆ (ಅ) 7 ವಿಭಂಗದಿನೊಡಂಬಡಂ (ಅ).

ಪ್ರಯೋಗಂ ॥

[1]ಮುತಯ್ಯ ಚದುರಿದೇನೆನೆ[1]
ಮುತ್ತಲ್ಲದುದುಂಟೆ ವಸ್ತು ಪೇೞತೆನೆ ಸತಿ [2]ನೀ ।
ಮಿತ್ತಿರಿಮೆನೆ[2] ಕರಮೊಳ್ಳಿ
ತ್ತಿತ್ತಾಗಡೆ ನಿಮ್ಮೊಳಿರ್ಪವೆನೆ ವೃದ್ಧವಿಟಂ ॥ ೬೦೨

ಮುನ್ನಿನ ಕಡನಂ ನೀಂ ಕುಡು
ಮುನ್ನಿಲ್ಲದ ಕಡನನೆಂತು ಪಿಡಿಯೆಂದೀವೆಂ ।
[3]ನಿನ್ನೀ[3]ಪಿಡಿಯೆನೆ ಕುಡು ಕಡ
ನೆನ್ನಂ ಪಿಡಿಯುಳ್ಳೊಡಾನೆಯಾಯೆನೆ ಕೆನ್ನಂ ॥ ೬೦೩

ಕಾಕುವಕ್ರೋಕ್ತಿಗೆ ॥

* ದಾರುಣಮಂ ಶರಶಲ್ಯಮ
ನೋರಂತಿರೆ ಪುಣ್ಣೊ[4]ಳುಡಿದು[4] ಬಿಡದುಳ್ಕು[5]ವುದಂ[5] ।
ಸ್ಮರಿಸುವರುಮೊಳರೆ ಕೆಲರ್
ಸ್ಮರಿಸುವರುಮೊಳರೆ ಖಳರ ಕಟುಕೋಕ್ತಿಗಳಂ ॥ ೬೦೪

ಇದು ಗುಣವಿವೇಕದೊಳ್ ಶಬ್ದಾಲಂಕಾರನಿರ್ಣಯ ಪ್ರಕರಣಂ ದ್ವಿತೀಯಂ.

---

# ಅರ್ಥಾಲಂಕಾರ ಪ್ರಕರಣಂ

## ಸೂತ್ರಂ ೧೪೩

ಅರ್ಥಾಲಂಕಾರ ಭಾಗಂಗಳ್ ॥

† ಪ್ರವರಾರ್ಥಾಲಂಕಾರಂ
ವಿವಿಧವಿಕಲ್ಪಪ್ರಪಂಚಿತಂ ಕ್ರಮದಿಂ ವಾ ।
ಸ್ತವಮುಪಮೆಯತಿಶಯಂ [6]ಶ್ಲೇ
ಷ[6]ವೆಂದು ನಾಲ್ಕುಂ ಪ್ರಕಾರದಿಂ ನೆಱೆದಿರ್ಕುಂ ॥ ೬೦೫

ವೃತ್ತಮಲ್ಲ ॥

---

1 ಮುತ್ತೈದೇವುದುಚದುರೆಗೇ (ಅ), ಮತ್ತೊಂದೇವುದು ಚದುರಿಗೇ (ಓ). 2 ಕೂರ್ತ ತ್ರಿಯೆನೆ (ಓ). 3 ನಿನ್ನಿ (ಅ). * ರುದ್ರಟ—II, 17. 4 ಳಡಿಮ (ಅ). 5 ವುದಂ (ಅ). † ರುದ್ರಟ—VII, 9. 6 ಶ್ಲಿಷ್ಟ (ಓ).

### ಸೂತ್ರಂ ೧೪೪

ವಾಸ್ತವಂ

* ವಸ್ತುಸ್ವಭಾವಕಥನಂ
ವಾಸ್ತವಮುಪಮಾದ್ಯಶೇಷವಕ್ರೋಕ್ತಿವಿಪ ।
ರ್ಯ್ಯಸ್ತಂ ಸಮಸ್ತಲೋಕಮ
ನಸ್ತೋಭನಕಾರಿ ಚಾರುತರ ಪುರುಷಾರ್ಥಂ ॥ ೭೦೬

### ಸೂತ್ರಂ ೧೪೫

ವಾಸ್ತವ ಭೇದಂ ಗಳ್ ॥

† ಜಾತಿಸಹೋಕ್ತಿಭಾವಪರಿವೃತ್ತಿಯಥಾಕ್ರಮಪರ್ಯ್ಯಾಯಾವಳೀ
ಹೇತುಸಮುಚ್ಚಯಾನುಮಿತಿಸೂಕ್ಷ್ಮಲವವ್ಯತಿರೇಕದೀಪಕಾ ।
ಖ್ಯಾತಿಸಮಾಹಿತಾವೃತಿಪರಸ್ಪರಸಾರನಿಮೀಲನಂಗಳಿಂ
[1]ದೀತೆಱ[1]ದಿಂದ[2]ಮೊಂದಿ[2] ನೆಗಟ್ಟುಂ [3]ನೆಱ[3] ವಾಸ್ತವಭೇದವೃತ್ತಿ[4]ಗಳ್[4] ॥ ೭೦೭

### ಸೂತ್ರಂ ೧೪೬

ಜಾತಿ

ಜಾತಿಯೆನಿಕುಂ ಸ್ವಭಾವಾ
ಖ್ಯಾತಿ ಯಥಾವಸ್ಥಿತಾರ್ಥವಿಷಯಾರ್ಥಕೃತೋ ।
ದ್ಯೋತನಮವ್ಯಪರೀತ್ಯಂ
ಜಾತಿದ್ರವ್ಯಕ್ರಿಯಾಗುಣಪ್ರತಿ[5]ಬದ್ಧಂ[5] ॥ ೭೦೮

ಲಕ್ಷ್ಯಂ ॥

ಜಾತಿಸ್ವಭಾವಾಖ್ಯಾನಕ್ಕೆ ॥

ಸೊಗಯಿಸಿ ತೋರ್ಪ ಸೋಗೆ ಕೊರಲೊಳ್ ಪೊಗರ್ವಟ್ಟೆಸೆದಿರ್ಪ ಕರ್ಪು ಕೆ
ಯ್ಮಿಗೆ ಕಡೆಗಣ್ಗಳೊಳ್ ಪೊಳೆವ ಬೆಳ್ಪು ಶಿಖಾಗ್ರದೊಳೊಂದಿದೊಳ್ಪು ಮೆ ।
ಲ್ಪೊಗೆದಿರೆ ಕೇಗುವಿಂಚರದ ನುಣ್ಪು ಮನಂಗೊಳೆ ಚೆಲ್ವನಾಳ್ದುದೀ
ನಗವನರಾಜಿಯೊಳ್ [6]ಸುಟಿಯು[6]ತಿರ್ಪ ವಿಚಿತ್ರಶಿಖಂಡಿಮಂಡಲಂ ॥ ೭೦೯

ದ್ರವ್ಯಸ್ವಭಾವಾಖ್ಯಾನಕ್ಕೆ ॥

‡ ಕಱೆ ಕೊರಲೊಳ್ ಕಣ್ ನೊಸಲೊಳ್
ಪೆಱೆ ಮಕುಟದೊಳಹಿ[7]ವಿಭೂಷಣಾವಳಿ[7] ತೋಳೊಳ್ ।
ನೆಱೆದಿರೆ ಕರಮೆಸೆದಂ ಪಲ
ತೆಱದ ಮರುಳ್ವಡೆಯ ನಡುವುಮಾಪತಿರುದ್ರಂ ॥ ೭೧೦

---

* ರುದ್ರಟ—VII, 10. † ರುದ್ರಟ—VII, 11, 12. 1 ಬೀತೆಱ (ಅ). 2 ಮಿಂತು (ಓ). 3 ಸಲೆ (ಅ). 4 ಯೊಳ್ (ಅ). 5 ಬಂಧಂ (ಅ). 6 ಸುಟಿವು (ಓ) ‡ ದಂಡಿ—II, 11, 12. 7 ವಿಭೂಷಣಂನಳಿ (ಅ).

ಕ್ರಿಯಾಸ್ವಭಾವಾಖ್ಯಾನಕ್ಕೆ ॥

ವಳಿಗಳಟಿಯೆ ಬಿಂಕಂಬೆತ್ತ ವೃತ್ತಸ್ತನಂ ಕ
ಣ್ಗೊಳಿಸೆ ತೊಳಗೆ ಬಾಹಾಮೂಲಮೂರುದ್ವಯಂ ಸಂ ।
ಚಳಿಸೆ ನಿಜಪದಾಂಗುಷ್ಠಾಗ್ರದಿಂ ನಿಂದು ಕಣ್ಗಳ್
ಪೊಳೆಯೆ ಮಿಳಿರ್ವ ಕೊಂಬಂ ನಿಳ್ಕಿ ಪೂಗೊಯ್ದಳೊರ್ವಳ್ ॥ ೬೧೧

ಗುಣಸ್ವಭಾವಾಖ್ಯಾನಕ್ಕೆ ॥

* ಮನದೊಳ್ ಮುದಮಂ ಕೋಮಳ
ತನುವಿನೊ[1]ಳತ್ಯಂತ[1] ರೋಮಹರ್ಷಣಮಂ ಕ ।
ಣ್ಗೆ ನಿಸಿನಿ[2]ಸಾಮಿಾಳನ[2]ಮಂ
ಜನಿಯಿಸುತುಂ [3]ಪ್ರಿಯೆಯ[3] ಸೋಂಕು ಪಡೆದುದಲಂಪಂ ॥ ೬೧೨

## ಸೂತ್ರಂ ೧೪೭

ಸಹೋಕ್ತಿ ಭಾವಂ

† ಸಮಕಾಲಮಪ್ಪುವೆರಡ
ರ್ಥಮನೊಡನೆಯೆ [4]ಪೇಲ್ವುದದು[4] ಸಹೋಕ್ತಿ ವಿತರ್ಕ ।
ಕ್ರಮದಿಂದರ್ಥಾಂತರಮಂ
ಸಮನಿಸುವೊಂದುಕ್ತಿ ಭಾವಮೆನೆ ಪೆಸರ್ವಡೆಗುಂ ॥ ೬೧೩

ಲಕ್ಷ್ಯಂ ॥

ಸಹೋಕ್ತಿಗೆ ॥

ಅಲರ್ದುವೊಡನೊಡನೆ ಕುವಲಯ
ಕುಲಮುಂ ಕುಲಟಾಮುಖಂಗಳುಂ ಮುಗಿದುವು ನಿ ।
ಶ್ಚಲಯೋಗನಿರತಸಂಧ್ಯಾಂ
ಜಲಿಯುಂ ಸರಸಿರುಹವನಮುವೊಡನೊಡನಾಗಳ್ ॥ ೬೧೪

ಬಿರಯಿಗಳ ಸುಯ್ಗಳೊಡನೆಯೆ
ಪಿರಿಯುವು ದೆವಸಂಗಳಾದುವವಟಿವಟಿ ಪರಿ ।
ಸ್ಫುರಿತಂಗಳೊಡನೆ ಕುಂದಿದು
ವಿರುಳ್ಗಳುಂ [5]ಮುಂಚಿ[5] ಬಂದ ಜಳದಾಗಮದೊಳ್ ॥ ೬೧೫

---

* ದಂಡಿ—II, 12, 11. 1 ಳಂತಂತೆ (ಅ). 2 ಸುನ್ಮೀಳನ. 3 ಪ್ರಿಯನ (ಅ.ಓ). † ರುದ್ರಟ—VII, 17, 40. 4 ಪೇಳ್ವೊಡದು. 5 ಮುಂಚೆ (ಅ.ಓ).

ಧ್ವಾವಕ್ಕೆ ॥

* ಪಡುವಳ್ ಕೀಟಿಲೊಳೆಮ್ಮ ತೊಟ್ಟು ಪಡುವಳ್ ಮುತ್ತಚ್ಚೆಯಾಕೋಣೆಯೊಳ್
ಪಡುವಂ ಶಕ್ತಿವಿಹೀನನಂಧಬಧಿರಂ ಕೇಳಜ್ಜನೀಬಾಗಿಲೊಳ್ ।
ಪಡುವೆಂ [1]ಬಾಲೆಯೆನೊರ್ವ[1]ಳಿಲ್ಲಿ ಮನೆಯಾಣ್ಮಂ ಪೋದನಿಂದೊರ್ಗೆ ನೀಂ
ಪಡಲೆಂದೆಂತೆಡೆವೇಡುವಯ್ ಪಥಿಕ ಮತ್ತೀ ಪೊಟ್ಟುಟೊಳ್ [2]ಗಾಂಪನೇ[2] ॥

## ಸೂತ್ರಂ ೧೪೮

ಪರಿವೃತ್ತಿ ಯಥಾಕ್ರಮಂ

† ಒಂದಂ ಕೊಟ್ಟೊಂದಂ ಕೊ
[3]ಳ್ವಂದಂ[3] ಪರಿವೃತ್ತಿಯೆಂಬುದಕ್ಕುಂ ತರದಿಂ ।
ದೊಂದಿರೆ ನಿರ್ದೇಶಸ್ಥಿತಿ
ಯಿಂದಂ ಪೇಟ್ಟುದು ಯಥಾಕ್ರಮಂ ಮುನಿಮತದಿಂ॥ ೬೧೭

ಲಕ್ಷ್ಯಂ ॥

ಪರಿವೃತ್ತಿಗೆ ॥

ಬಿಳಿಯಲರ್ಗಣ್ಗಳ್ ಬೆಳ್ಪಂ
ಲಲನಾಜನದಧರ[4]ಮಣಿಗೆ[4] ಕೊಟ್ಟುದಱ ಪುದುಂ ।
ಗೊಳಿಸಿದ ಕೆಂಪಂ ನೀರ್ವೊ
ಕುಳಿಯೊಳ್ ಮಾಱಾಡಿ ಕೊಂಡ ತೆಱದಿಂ ತೋರ್ಕುಂ ॥ ೬೧೮

ಯಥಾಕ್ರಮಕ್ಕೆ ॥

ಇದು [5]ನಿನ್ನರ್ಚಿಸಿದಿ[5]ಕ್ಷುಚಾಪಮಿದು ನಿನ್ನೀಲೋಕಮಂ ಕೆಯ್ಗೆ ಮಾ
ಡಿದ ಪುಷ್ಪಾಸ್ತ್ರಮಿದಲ್ತೆ ನಿನ್ನ ವಿಜಯಪ್ರಾರಂಭದೊಳ್ ತೋರ್ಕೆಗೆ ।
ತ್ತಿದ [6]ಜೈತ್ರ[6]ಧ್ವಜಮೆಂದು ತೋರ್ಪ ತೆಱದಿಂ ಭ್ರೂರಾಸ್ಯಮಂ ನೀಳ್ದಪಾಂ
ಗದ ಬೆಳ್ದಿಂಗಳನೆಡ್ಡಮಪ್ಪ ಕಬರೀವಿಸ್ತಾರಮಂ ತೋಱಿದಳ್ ॥ ೬೧೯

‡ ಅವಿಹಿತ[7]ವೇಗ[7]ಮೇಟ್ಗೆಯು ಜವಂ ವ್ರಣಮಕ್ಷತಕಾಯಮೆತ್ತಿ ಕ
ಟ್ಟುವ ಮದಮುಣ್ಮಿ ಸೋರ್ವ ಸೊನೆ ಬೀಳ್ವ ಗಜಧ್ವಜಮಂಬರಕ್ಕೆ ನಿ ।
ಳ್ಕುವ ಜಯಕೇತು ಸಂದೆಯುದ ದಂದುಗಮಂ [8]ಕಿಡಿಸಿತ್ತು[8] ಮುಂದಣೋ
ಡುವ ರಿಪುದಂತಿಗಂ ಪೆಱಗಣಟ್ಟುವ [9]ಱಟ್ಟರ[9]ಮೇರುದಂತಿಗಂ ॥ ೬೨೦

---

* ರುದ್ರಟ—VII, 41. 1 ಬಾಲಕಿಯೊರ್ವ (ಅ). 2 ಗಾಂಪಿನಿಂ (ಓ).
† ದಂಡಿ—II, 351; ಯಥಾಸಂಖ್ಯವೇ ಯಥಾಕ್ರಮಂ II, 273; ರುದ್ರಟ—VII, 34. 3 ಳ್ವಂದದು (ಓ). 4 ರುಚಿಗೆ (ಅ). 5 ನೀನರ್ಚಿಸುವಿ. 6 ಮಾನ (ಅ).
‡ ಈ ಪದ್ಯಕ್ಕೆ ಹಿಂದೆ "ಎರಡಱೊಳ್ ಬಹುಳ ನಿಶ್ಚಯಶಬ್ದಮದಕ್ಕೆ ಲಕ್ಷ್ಯಂ" ಎಂದು ಒಂದೆ ಪ್ರತಿಯಲ್ಲಿದೆ. 7 ಸೇಕ, ಶೀತ (ಅ). 8 ಬಿಡಿಸಿತ್ತು (ಅ). 9 ರಟ್ಟದ (ಅ).

ವ॥ ಇಲ್ಲಿ ಕೆಲರ್ ವ್ಯುತ್ಕ್ರಮಗಣನೆಯಿಂದೆ ನಿಂದಿತಕ್ರಮಮೆಂದು ಪೇೞ್ವರ್.

## ಸೂತ್ರಂ ೧೪೯

* ನುಡಿಯುದೆ ಮನದರ್ಥಮನದು
[1]ನುಡಿದಂ[1]ತಿರೆ [2]ನುಡಿದ[2] ನುಡಿಯೆ ಪರ್ಯಾಯಂ ಮ ।
ತ್ತಡಕಿಲ್ಗೊಳೆ ಪಲವುಮನೊಂ
ದೆಡೆಯೊಳ್ ಸಮಗೊಳಿಸಿ ಪೇೞ್ವುದಾವಳಿ ಪೆಸರಿಂ ॥ ೬೨೧

ಪರ್ಯಾಯಂ ಆವಳಿ

ಲಕ್ಷ್ಯಂ ॥

ಪರ್ಯಾಯಕ್ಕೆ ॥

ಬನದೊಳಗೆ [3]ನೋಡಿ[3] ಪೂಸ[4]ವೂ
ವಿನ[4] ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ ।
ನಿನಿತೊಂದು [5]ಬೇಗಮಂ[5] ನಿ
ನ್ನಿನಿಯನ ಪಕ್ಕದೊಳಿರೆಂದು ಸಖಿ ತೊಲಗುವುದುಂ ॥ ೨೨

ಆವಳಿಗೆ ॥

† ಕೊಳಗಳ್ ದಳಿತಾಬ್ಜಂಗಳ್
ದಳಿತಾಬ್ಜಂಗಳ್ ಸಮೃದ್ಧಮಧುಗಳ್ ಮಧುಗಳ್ ।
ಚಳದಳಿಕುಳಾಕುಳಂಗಳ್
ವಿಳಸದಳಿಪ್ರಕರಮಧುರವಿರುತಿಯೆ ಬನದೊಳ್ ॥ ೬೨೩

‡ ಆವಳ್ಯಪೋಹಕ್ಕೆ ॥
ಕಳರುತಿಯಿಲ್ಲದ ಮಧುಪಾ
ವಳಿ ಮಧುಕರನಿಕರಮಿಲ್ಲದಂಬುರುಹವನಂ ।
ಜಳರುಹಮಿಲ್ಲದ ತಿಳಿಗೊಳ
ನಲರ್ದ ಸರಃ[6]ಪ್ರಸರ[6]ಮಿಲ್ಲದೂರಿಲ್ಲದಱೊಳ್ ॥ ೬೨೪

## ಸೂತ್ರಂ ೧೫೦

§ ಹೇತುಮದಾಖ್ಯಾನಂ ಸಹ
ಹೇತುಕಮದು ಹೇತುವೆಂಬಲಂಕೃತಿಯಕ್ಕುಂ ।
ಮಾತೇಂ ಬಹುಸಂಕಥನಂ
ಜಾತಿದ್ರವ್ಯಾದಿಕಂ ಸಮುಚ್ಚಯ[7]ಮಕ್ಕುಂ[7] ॥ ೬೨೫

ಹೇತು ಸಮುಚ್ಚಯಂ

---

* ದಂಡಿ—II, 295; ರುದ್ರಟ—VII, 42, 109. ಆವಳಿಗೆ ಏಕಾವಳಿಯೆಂಬ ಹೆಸರುಂಟು. 1 ನುಡಿವಂ (ಅ). 2 ನುಡಿವ (ಅ). 3 ಪೋಗಿ (ಅ). 4 ಮಾವಿನ (ಅ). 5 ಬೇಗದಿಂ (ಅ). † ರುದ್ರಟ—VII, 110, 111. ‡ ಆವಳಿಗೆ ಉದಾಹರಣೆಯನ್ನು ಕೊಡುವಾಗ ಮೊದಲು ' ಏಧಿಗೆ " ಎಂದಿದ್ದು, ಮುಂದೆ " ಅಪೋಹಕ್ಕೆ " ಎಂದಿದ್ದರೆ ಸ್ಪಷ್ಟವಾಗುತ್ತಿತ್ತು. 6 ಪ್ರತತಿ (ಅ). § ರುದ್ರಟ—VII, 82. 7 ಮೆನಿಕುಂ (ಅ).

ಲಕ್ಷ್ಯಂ ॥

ಜ್ಞಾಪಕಹೇತುಗೆ ॥

ತಿವಳಿಯೊಳ್ ಮಿಡುಕಾಱದ ಮಣ್ಣಿಂದಿಕ್ಕಿದ ಲಂಡದ ಬೆಂಕೆಯಿಂ
ಕವಿವ ಕಿಟ್ಟದದೊಳ್ಪೊನಲೊಳ್ ಸುಯ್ಯಾಱದ [1]ಪೆರ್ನೊರೆ[1]ಯಿಂ ತಗು ।
ಳ್ದವಿಹತಾಂಬುವ ಬಲ್ಪೊನಲಿಂದಿಪರ್ಬಿದ ಬಟ್ಟೆಯೊಳೊಕ್ಕ ಪ
ಲ್ಲವನಿಕಾಯದಿನಂದಱಿದಂ ಕಾಡಾನೆಗಳಾಗಡೆ ಪೋದುದಂ ॥ ೬೨೬

ಕಾರಕಹೇತುಗೆ ॥

ಪಂದಿಯಿಂ ಕೆದಱಿದುತ್ಪಳಮುಂ ವನದಂತಿಯಿಂ
ನೊಂದು ಸೂಸಿದ ಸರೋಜಮುಮೊಯ್ಯನೆ ನೀರುಣಲ್ ।
ಬಂದು ಪೋದ ಮೃಗದಗ್ರಖುರಚ್ಯುತವಾರಿಯಿಂ
ನಾಂದೆರಟ್ಟಿಡಿಯುಮಿಂಬು ತದಗ್ರಿಮಭಾಗದೊಳ್ ॥ ೬೨೭

ಪರಂಪರಿತಹೇತುಗೆ ॥

* ವಿನಯಮನಿತ್ತುದಿಂದ್ರಿಯಜಯಂ ವಿನಯಂ ಗುಣಸಂಪದಂಗಳಂ
ಜನಿಯಿಸಿದತ್ತು ಸದ್ಗುಣಗಣಂ ಪಡೆದತ್ತು ಜನಾನುರಾಗಮಂ ॥
ಜನದನುರಾಗಮಾಗಿಸಿದುದಾ[2]ವಗಮಿದ್ಧವಿ[2]ಶುದ್ಧಕೀರ್ತಿಯಂ
ತನಗೆನೆ ರಾಜ್ಯಲಕ್ಷ್ಮಿಯನನುಷ್ಠಿಸಿದಂ ನಯದಿಂ ಯುಧಿಷ್ಠಿರಂ॥ ೬೨೮

ಅಭಾವಹೇತುಗೆ ॥

† ಅವಿನಯದಿನನಿಂದ್ರಿಯವ
ರ್ಗವಿಜಯದಿನ[3]ಬುಧವಿಶಿಷ್ಟ[3]ಸಂಭಾವನೆಯಿಂ ।
ವಿವಿಧವ್ಯಸನಂಗಳ್ ಸಂ
ಭವಿಸುಗುಮಾರ್ಗಂ ವಿಶಿಷ್ಟವಿದ್ವಿಷ್ಟಂಗಳ್ ॥ ೬೨೯

ಸಮುಚ್ಚಯಕ್ಕೆ ॥

ನೃಪನ ದಯೆಯುಂ ನಚ್ಚುಂ ತನ್ನಣ್ಮ [4]ಮಾರ್ಪುದು[4]ಮಾಂತ ಭೂ
ಮಿಪನ ಮನದೊಂದುರ್ಕುಂ ಸೊರ್ಕುಂ ಬಿಗುರ್ತಿರವುಂ ನಿಜ ।
ದ್ವಿಪಹಯರಥಾನೀಕಾನೇಕಪ್ರಧಾನರ ಸಾಪುಮಾ
ತಪನತನಯಂಗಾಗಳ್ ಕಾಯ್ಪಂ ನಿಮಿರ್ಚಿದುವಾಜಿಯೊಳ್ ॥ ೬೩೦

ಕೃತಮಣಿವಿಭೂಷಣಂಗಳ
ನತಿಶಯಿಸಿದುವವರ ಕೊರಲೊಳಂ ತೋಳೊಳ[5]ಮು ।
ತ್ಥಿತ[5]ಮಾಗಿ ಭೂಷಣಂಗಳ್
ನಿತಂಬಮಂಡಳದೊಳಂ ಕುಚಾಭೋಗದೊಳಂ ॥ ೬೩೧

---

1 ಪೊನ್ನೊರೆ (ಅ). * ರುದ್ರಟ—VII, 85. 2 ಮಿಂತು (ಓ). † ದಂಡಿ—II, 247. 3 ಬುಧವಿತರ್ಕ (ಓ). 4 ಮಾರ್ಪುದು (ಅ), ಮಾಳ್ಪುದು (ಓ). 5 ಮುದ್ಧತ (ಅ).

ಕೊಡೆ ಗುಡಿ ತೋರಣಂ [1]ದಧಿ[1] ಮಧುದ್ರವಮಚ್ಚಗೞಂಕೆ ರಾಜೆ ಸೆಂ
ಗಡಮಲರಕ್ಷತಂ ಬಿಳಿಯ ಸಾಸವೆ ಪೊಂಗೊಡನಷ್ಟಶೋಭೆ ಕ ।
ನ್ನಡಿ ಕಡೆ ವರ್ಧಮಾನಪಟಹಂ ತಿಱೆ ಮಂಗಳಗೀತನಾದಮೆ
ಲ್ಲೆಡೆಗಳೊಳಲ್ಲಿಗಲ್ಲಿಗಧಿಕಂ ಪಡೆದತ್ತು ಜನಾನುರಾಗಮಂ ॥ ೬೩೨

ಆಟಂ ಬಾಜನೆ ಗಾಡಿಗಳ್ ಪಸದನಂ ಬೆಳ್ದಿಂಗಳೊಳ್ಪಾತು ಕೊಂ
ಡಾಟಂ ಕತ್ತುರಿ ಕಪ್ಪುರಂ ನಗೆ ತೆಗಟ್ ಪಾಟಂ ಬಿಯಂ ಜವ್ವನಂ ।
ನೋಟಂ ತಂಬುಲಮಿಂಪು ಕಂಪು ವಿಭವಂ ಮೆಯ್ಮೆೞಳವೆಂದಿಂತಿವಂ
ಬೇಟಕ್ಕಾಗರವೆಂಬೆನಣ್ಣ ಸುಸಿಲೇಂ ಪೇಟ್ವಾಗದೊಳ್ ತೀರದೇ ॥ ೬೩೩

## ಸೂತ್ರಂ ೧೫೧

* ಸಾಧನವಂ ಸಾಧ್ಯಕ್ಕವಿ
ರೋಧಿಯನಱಿದೂಹೆಗೆಯ್ವುದನುಮಿತಿಯೆನಿಕುಂ ।
ಸಾಧುಸಮಾಧಿಪರೇಂಗಿತ
ಬೋಧಂ ನಿ[2]ರ್ವಾದ[2]ಮಪ್ಪುದಂತದು ಸೂಕ್ಷ್ಮಂ ॥ ೬೩೪

ಅನುಮಿತಿ ಸೂಕ್ಷ್ಮಂ

ಲಕ್ಷ್ಯಂ ॥
ಅನುಮಿತಿಗೆ ॥

ಎಳಮಿಂಚಿಲ್ಲಕ್ಕುಮಾಖಂಡಲಲಲಿತಧನುರ್ದಂಡಮಿಲ್ಲಕ್ಕುಮಭ್ರಾ
ವಳಿಯಿಲ್ಲಕ್ಕುಂ ಕದಂಬಾನಿಲನ[3] ಸುಟಿವದಿಲ್ಲಕ್ಕು[3]ಮುದ್ಯನ್ಮಯೂರೀ ।
ಕುಳಲೀಲಾತಾಂಡವಾಡಂಬರವಿಳಸನಮಿಲ್ಲಕ್ಕು[4]ಮಿಂತಾ[4]ಮಹೀಮಂ
ಡಳದತ್ತಲ್ ನಲ್ಲನಂತಲ್ಲದೊಡೆ ತಡೆದದೇಕಿರ್ಪನಿಂದಲ್ತೆ ಬರ್ಪಂ ॥ ೬೩೫

† ಅದಲ್ಲದೆಯುಂ ॥

ಬೆಸದಿರೆ ನಿನ್ನೋಪಳ ಕಾ
ಲ ಸವಸದಿಂದೆಱಗಿ ತಿಳಿಪಿದಯ್ ನಿವ್ಯಾರ್ಜಂ ।
ನೊಸಲೊಳ್ ನಿಸದಮಲಕ್ತಕ
ರಸತಿಲಕ[5]ಮದಿಲ್ಲ[5]ದಂದದೇಕಿಂತಕ್ಕುಂ ॥ ೬೩೬

ಸೂಕ್ಷ್ಮಕ್ಕೆ ॥

‡ [6]ಏಗಳ್[6] ನಮಗಕ್ಕುಂ ಸಂ
ಯೋಗವೆನಲ್ ಬಗೆವ ನಲ್ಲನಂ ಕಾಱಿತು ಮನೋ ।
ರಾಗದಿನೊಡರಿಸಿದಳ್ ಚೆ
ಲ್ವಾಗಿರೆ ಪೆಱಳೊರ್ವಳಬ್ಜದಳಮುಕುಳನಮಂ ॥ ೬೩೭

---

1 ಘನ (ಓ). * ದಂಡಿ—II, 260. 2 ರ್ಬಾಧ (ಓ). 3 ನೆಸಗುವು (ಓ.ಅ). 4 ಮಂತಾ (ಅ). † ರುದ್ರಟ—VII, 57. 5 ಮದಲ್ಲ (ಅ). ‡ ದಂಡಿ—II, 261. 6 ಆಗಳ್ (ಓ).

ಅಂತುಮಲ್ಲದೆಯುಂ ॥

* ವಿನಯೋಪಚಾರವಚನಮು
ಮನುಕೂಲಾಚರಣಮುಂ ವಿಭಿನ್ನಾಸನಮುಂ ।
ಮನದೊಳಗೆ ಪುದಿದು ಪೊಣ್ಮಿದ
ಮುನಿಸಂ ಕನ್ನಡಿಪು[1]ವಾಗೆ[1] ಬಗೆವೆಂ ಪ್ರಿಯೆಯೊಳ್ ॥ ೬೩೮

## ಸೂತ್ರಂ ೧೫೨

ಲೇಶಂ ಅಥವಾ ಲವಂ

† ಗುಣಮನೆ ತಪ್ಪಿದು ದೋಷದ
ಗಣನೆಗೆ ದೋಷಮುಮನಿನಿಸು ಗುಣಗಣನೆಗೆ ತಂ ।
ದೊಣರ್ಪುದು ಲೇಶಂ ವಿಬುಧಾ
ಗ್ರಣಿಗಳ್ ಕೆಲಬರ್ ‡ ನಿಗೂಹ[2]ನಂ[2] ಲವಮೆಂಬರ್ ॥ ೬೩೯

ಲಕ್ಷ್ಯಂ ॥

ಲೇಶಕ್ಕೆ ॥

ಒಡನಿರ್ದಗಲ್ಕೆಯಾದೊಂ
ದೆಡೆಯೊಳ್ ದುಃಖಮುನಸಹ್ಯಮಂ ಮಾಳ್ಪುದಱಿಂ ।
ಸುಡು ಸುಡು ಸಜ್ಜನರಪ್ಪುವ
ರೊಡಗೂಟಮ[3]ನಕ್ಕ[3] ಖಳರ ಕೂಟಮೆ ಸುಖದಂ ॥ ೬೪೦

ನಿಗೂಹನಕ್ಕೆ ॥

ಪರಿವಿಡಿಗೆಯ್ಯೆ ಸೊಂದಿಗಿಳಿ ತಂದೆಯ ತಾಯ ಸಮೀಪದೊಳ್ ತನೂ
ದರಿಯ ರತೋಪಯುಕ್ತರುತಿಯಂ ವಿನತಾನನೆ ನಾಣ್ಚಿ[4]ತಾಳತ ।
ತ್ಪರ[4] ಶಿಶುನರ್ತನಪ್ರಹತಕಂಕಣಝುಂಕೃತಹಸ್ತತೂರ್ಯನಿ
ರ್ಭರರವದಿಂದದಂ ಮಱಸಿದಳ್ ಗಡ ಮುಗ್ಧೆಯದೇಂ ವಿದಗ್ಧೆಯೋ ॥ ೬೪೧

## ಸೂತ್ರಂ ೧೫೩

ವ್ಯತಿರೇಕಂ ದೀಪಕಂ

§ ವ್ಯತಿರೇಕಮುಭಯಸಾಮ್ಯ
ಪ್ರತೀತಿಯಂ ತೋಱಿ ಭೇದಮಂ ಮಾಳ್ಪುದು‖ಸಂ ।
[5]ಗತಿಯಿಂದಂ ಮಧ್ಯಾಂತ[5]
ಸ್ಥಿತಮಾಗಿ ಬೆಳಪ್ಪುದಱಿಗೆ ದೀಪಕಮಕ್ಕುಂ ॥ ೬೪೨

---

* ರುದ್ರಟ—VII, 58. 1 ವಾಗಿ (ಅ). † ರುದ್ರಟ—VII, 100. ‡ ದಂಡಿಯಮತ : ದಂಡಿ—II, 265. 2 ಮಂ (ಅ). 3 ನಕ್ಕೆ (ಓ). 4 ತೋಳತಳ್ಪದ, ಕಾಮತತ್ಪರ (ಅ), ತೋಳತಳ್ತುರು (ಅ.ಇ). § ದಂಡಿ—II, 180. ‖ ರುದ್ರಟ—VII, 64, 65. 5 ಗತಿಯಾದಿಮಧ್ಯಮಂತ (ಅ).

ಲಕ್ಷ್ಯಂ ||

ವ್ಯತಿರೇಕಕ್ಕೆ ||

ಗಂಭೀರಮಮಳಲಕ್ಷ್ಮೀ
ಸಂಭವಪದಮಧಿಕಸತ್ವಮಾಗಿಯುಮೆಯ್ದ |
ಲ್ಕಂಭೋಧಿ ನೆಱೆದು[1]ದಿಲ್ಲವ[1]
ನಂ ಭಾಸುರನಿಶಿತಮತಿಯನತಿಕಲುಷಜಡಂ || ೭೪೩

ವಸುಧೆಗೆ ನಂದಹೀನರಿಪುವರ್ಗಮನೋಡಿಸಿ ಚಕ್ರಿ ಮೆಚ್ಚಿ ಬ
ಣ್ಣಿಸೆ ಪತಿಭಕ್ತಿಯಂ ಮೆಱೆದು ಮಂತ್ರಪದಕ್ಕಧಿನಾಥನಾಗಿ ಪೆಂ |
ಪೆಸೆವಿನಮಾರೊಳಂ ವಿಮುಖವೃತ್ತಿಯೊಳೊಂದದ ಪಕ್ಷಪಾತದಿಂ
ದೆಸಗದ ವೈನತೇಯನಿವನೆಂಬುದು ಸಾಹಸವೈನತೇಯನಂ || ೭೪೪

ವಾರಿಜಗಂಧಿ ವಿಭಾತನ
ಮಾರಂ ನಿಜಸುರಭಿ ನಿನ್ನ [2]ಸುಯ್ಯಿದಱೊಳದಂ[2] |
ತೋರಗೆಯಕ್ಕುಮೆ ಪರಗುಣ
ಹಾರಿಗೆ ನಿಜಗುಣ[3]ಮದೇಕೆ[3] ಸಮನಿಸಿದಪುದೋ || ೭೪೫

ಕಾರಕದೀಪಕಕ್ಕೆ ||

ನವಜಳದಾಗಮಮಿಂತೀ
ಭುವನಜನಕ್ಕೆಲ್ಲಮೆಯ್ದೆ ಮಾಡಿದುದಧಿಕೋ |
ತ್ಸವಮಂ ಮತ್ತಂತದೆ ತಾಂ
ಪ್ರವಾಸಿಗಳ್ಗೆರ್ದೆಯೊಳೊದವಿಸಿತ್ತದವಟಲಂ || ೭೪೬

ಓಸರಿಸಿದ ಜವನಿಕೆಯೊಡ
ನೋಸರಿಸಿದನಿಸರೆ ಕಂತು [4]ಕುಸುಮಾಂ[4]ಜಲಿಯಂ |
ಸೂಸಿದ ಪದದೊಳ್ ಸಭೆಗಂ
ಸೂಸಿದ[5]ನೊಡನೊಡನೆ[5] ನನೆಯ ಮೊನೆಯಂಬುಗಳಂ || ೭೪೭

ಆವರಿಸಿತ್ತೊ ನಭೋಂತ
ರ್ಭಾವಿವರಮನಮರ್ದಿನೆಸಕಮನೆ ಬಿರಯಿಗಳೋ |
ವ್ರೋವಿದು ಮದನನ ಸೋದನ
ದೀವಿಗೆಯೆನೆ ತೊಳಗಿ ಬೆಳಗಿದಂ ತುಹಿನಕರಂ || ೭೪೮

ಕ್ರಿಯಾದೀಪಕಕ್ಕೆ ||

ಸೊಗಯಿಸಿದುದು ಕಾರ್ಗಾಲದ
ಪುಗಿಲೊಳ್ ಜಲಜಲನೆ ಪರಿಯುತಿರ್ಪೊಳ್ವೊನಲುಂ |

---

1 ದಿಲ್ಲನ (ಅ). 2 ಸುಯ್ಯದಱೊಳಗಂ (ಅ), ಸುಯ್ಯಿದಱೊಳಗಂ (ಓ). 3 ನೊಳಕ್ಕೆ, ದೊಳಂತೆ (ಅ). 4 ಪುಷ್ಪಾಂ (ಅ.ಓ). 5 ನೊರ್ವೊದಲೆ (ಅ).

ಮುಗಿಲ ಪೊರೆವೊರೆಗಳೊಳ್ ಪೊಳೆ
ದೊಗೆವ ಚಳಚ್ಚಟುಳತರಗತಟಿದ್ವಿಳಸನಮುಂ ‖ ೭೪೯

ಧರೆಯಂ ಮೆಟ್ಟದೆ ಮೆಟ್ಟುವ
ಸುರಲಲನಾನೃತ್ಯಮಿತ್ತಲಭವನ ಸಭೆಯೊಳ್
ಕರಮೆಸೆದುದು [1]ವಾರ[1]ಸ್ತ್ರೀ
ಪರಿನರ್ತನಮತ್ತಲಾ ಮಹೀಶನ ಸಭೆಯೊಳ್ ‖ ೭೫೦

ಕುಳಿರ್ವೆಲರುಮಾಲನೀರುಂ
ತಳಿರ್ವಾಸುಂ ಚಂದ್ರಕಾಂತಮುಂ ಚಂದನಮುಂ ।
ಕೊಳನುಂ ನಂದನವನಮುಂ
[2]ಕಳೆಯುವೆ[2] ಬೇಸಗೆಯೊ[3]ಳೆನ್ನ[3]ಬೇಟದ ಸೂಡಂ ‖ ೭೫೧

## ಸೂತ್ರಂ ೧೫೪

* ಸಮನಿಸಿ ಬಿದಿವಸದಿಂದಂ

ಸಮಾಹಿತಂ ಆವೃತ್ತಿ

ಸಮಾಹಿತಂ ಬರ್ಪೊಡದು ಸಮಾಹಿತಮೆನಿಕುಂ ।
[4]ಸಮಗೊಂಡ[4]ರ್ಥಪದಾವೃ
ತ್ತಿ ಮತ್ತದಾವೃತ್ತಿಯೆಂಬ ಪೆಸರಂ ಪಡೆಗುಂ ‖ ೭೫೨

ಲಕ್ಷ್ಯಂ ‖

ಸಮಾಹಿತಕ್ಕೆ ‖

ಕಡುಗಟ್ಟಲೆಯೊಳ್ ಪ್ರಿಯನಿ
ರ್ದೆಡೆ[5]ಗಾಗಿಯೆ[5] ಪೋಗಲೆಂದು ಮನೆಯಂ ಪೊಱಮ ।
ಟ್ಟಡಿಯಿಡಲಱಿಯದೆ ಮಱುಗುವ
ಮಡದಿಗೆ ಬಗೆ ತೀರೆ ಮಿಂಚು ಮಿಂಚಿದುದಾಗಳ್ ‖ ೭೫೩

† ಮುಳಿದಿರೆ ನಿಜವಲ್ಲಭೆಯಂ
ತಿಳಿಪಲ್ ಕಾಲ್ಗೆರಗಲನಿಯನಿರ್ಪವಸರದೊಳ್ ।
ಜಳಧರನಿನದಂ [6]ನೆಗೆದುದು[6]
ತಳಮಳ[7]ಗುತ್ತಾಕೆ[7] ತಾನೆ ಬಿಗಿಯಪ್ಪುವಿನಂ ‖ ೭೫೪

---

1 ದೇವ (ಒ). 2 ಕಳೆಯುವೆ (ಅ). 3 ಳೆನಗೆ (ಅ). * ದಂಡಿ—II, 298; II, 116. 4 ಸಮಕೊಂಡ (ಅ). 5 ಗಾಗಿರ (ಅ). † ದಂಡಿ—II, 299. 6 ನೆಗ ಬ್ದುದು (ಅ). 7 ಗಾದಾಕೆ, ಗಾಗಾಕೆ (ಅ).

ಆವೃತ್ತಿಗೆ ॥

* ಅಲರ್ದುವು ಕುಟಜಂಗಳ್ ಪೂತುವಿಂಬಪ್ಪಿನಂ [1]ಕಂ
ದಲಿ[1] ಕುಸುಮಿಸಿದತ್ತುದ್ದಾಮನೀಪಾವನೀಜಾ ।
ವಲಿ ಬಿರಿದುವೆ ಜಾತೀಯೂಥಿಕಾಕೇತಕೀಸಂ
ಕುಲಮವಿರಲಗಂಧಾಮೋದಿತಾಶಾಂತರಾಲಂ ॥ ೬೫೫

ಪಡೆಗುಂ ಮಹಿಮೋನ್ನತಿಯುಂ
ಪಡೆಗುಂ [2]ಸನ್ಮಾರ್ಗ[2]ದೆಸಕಮಂ ಗುಣದೊಳ್ಪಂ ।
ಪಡೆಗುಂ ನಿರ್ಮಳಯಶಮಂ
ಪಡೆಗುಂ ಪಡೆಗುಂ ವಿಧುತ್ವಮಂ ಬುಧಸಂಗಂ ॥ ೬೫೬

ಕಲಿ ಪಾರ್ಥಂ ಪಾರ್ಥನಿಂದಂ ಕಲಿ ರವಿತನಯಂ ಪಾರ್ಥನಿಂ ಕರ್ಣನಿಂದಂ
ಕಲಿ ಭೀಮಂ ಪಾರ್ಥನಿಂ ಕರ್ಣನಿನನಿಲಜನಿಂ ರಾಘವಾಧೀಶಭೃತ್ಯಂ ।
ಕಲಿ ಶಕ್ರಾಪತ್ಯನಿಂ ಕರ್ಣನಿನನಿಲಜನಿಂದಂಜನಾಪುತ್ರನಿಂದಂ
ಕಲಿ ಧಾತ್ರೀಚಕ್ರದೊಳ್ ವಿಕ್ರಮಗುಣನಿಳಯಂ ವೀರಮಾರ್ತಂಡದೇವಂ॥ ೬೫೭

## ಸೂತ್ರಂ ೧೫೫

ಪರಸ್ಪರಂ ಸಾರಂ

† ಇತರೇತರಕಾರಕಸಂ
ಪ್ರತಿಪತ್ತಿ ಪರಸ್ಪರಂ ಸಮೂಹದೊಳೆಸೆವೊಂ ।
ದತಿಶಯಗುಣದಿಂ ನಿರ್ಧಾ
ರಿತಮಪ್ಪುದು ಸಾರಮೆಂಬ ಸದಲಂಕಾರಂ ॥ ೬೫೮

ಲಕ್ಷ್ಯಂ ॥

ಪರಸ್ಪರಕ್ಕೆ ॥

ಸರಿಗೆಗೆ ಕೊರಲ್ ಕೊರಲ್ಗಂ
ಸರಿಗೆಯಲಂಕರಿಸೆ ಸರಿಗೆವಂದುದು ಮುಯ್ಮ್ಕ ।
ಟ್ಟಿರದೆಱ ಬೆಡಂಗುಮೆಂಬಂ
ತಿರೆ ಕರ[3]ಮೊಪ್ಪಿದುದು[3] ಕೊರಲಗೇಂದ್ರಾತ್ಮಜೆಯಾ ॥ ೬೫೯

ಸಾರಕ್ಕೆ ॥

ಸಾರಂ ಸಂಸಾರದೊಳಱ
ಲಾರತ್ನಂ ಸಾರಮಲ್ಲಿ ಜವ್ವನಮದಱೊಳ್ ।
ಸಾರಂ ಮಧುರಾಕಾರಂ
ಸಾರಂ ಮತ್ತಂತ[4]ದಕ್ಕಮನು[4]ಕೂಲರಸಂ ॥ ೬೬೦

---

* ದಂಡಿ—II, 117. 1 ಕಂಟಲಿ, ಕಂಡಲಿ (ಅ). 2 ಸನ್ಮಾನ (ಅ).
† ರುದ್ರಟ—VII, 91; VII, 96. 3 ಮೊಪ್ಪುವುದು (ಅ). 4 ದಕ್ಕೆಯನು (ಬ), ದಕ್ಕಮನು (ಅ).

## ಸೂತ್ರಂ ೧೫೬

ನಿಮೀಳನಂ

* ಪ್ರಕೃತಿಯಿನಲ್ಲದೊಡಾಗಂ
ತುಕಹೇತುವಿನಿಂ ಪ್ರಕೋಪರಾಗಾದಿಮನೋ ।
ವಿಕೃತಿಯನುಪಲಕ್ಷಿಸಿ ತಿಳಿ
ಯೆ [1]ಕಾಣದಿರಲದು[1] ನಿಮೀಳನಂ ಪೆಸರಿಂದಂ ॥ ೬೬೧

ಲಕ್ಷ್ಯಂ ॥

† ಸರಳತರಧವಳಸುಸ್ನಿ
ಗ್ಧರೂಪಮಾ[2]ನೃಪನ[2] ದೃಷ್ಟಿ ಸಾಜದೊಳದಱಿಂ ।
ದೊರೆಕೊಂಡುದೊಂದು ಚೇತೋ
ನುರಾಗಮಱಿಯಲ್ಕೆ ಬರ್ಪುದಲ್ತ ಣಮಾರ್ಗಂ ॥ ೬೬೨

ಮದಿರಾಮದಧರಪಾಟಲ
ವದನೆಯ ಮನದೊಳ್ ಪೊದಳ್ದ ಕೋಪಂ ತಾನಂ ।
ತದು ಲಕ್ಷಿಸಲ್ಕೆ ಬಂದಿ
ರ್ದುದಿಲ್ಲ ಕೃತದೋಷ[3]ನಾಗಿಯುಂ[3] ಕಾಮುಕನಿಂ ॥ ೬೬೩

ಇವು ವಾಸ್ತವಭೇದಂಗಳ್ ॥

## ಸೂತ್ರಂ ೧೫೭

ಔಪಮ್ಯಂ

ಏನಾನುಮೊಂದು ತೆಱದಿಂ
ನಾನಾವಿಧವಸ್ತುರೂಪದೊಳ್ ಸಾದೃಶ್ಯಂ ।
ತಾನೆನಿಸಿ ತೋರ್ಪುದದು ಬುಧ
ಮಾನಿತಮೌಪಮ್ಯಮೆಂಬಲಂಕೃತಿಯಕ್ಕುಂ ॥ ೬೬೪

## ಸೂತ್ರಂ ೧೫೮

ಉಪಮಾಭೇದಂಗಳ್॥

ವೃ॥ ಉಪಮಾನಪ್ರತಿವಸ್ತುರೂಪಕಸಮಾಸೋಕ್ತಿಕ್ರಮಾಕ್ಷೇಪಸಾ
ಮ್ಯಪರಾಖ್ಯಾನನಿದರ್ಶನೋತ್ತರಸಸಂದೇಹಭ್ರಮಾಪಹ್ನುತಿ ।
ವ್ಯಪದೇಶಸ್ಮರಣಪ್ರತೀಪಸಮಯೋಗಾಪ್ರಸ್ತುತಸ್ತೋತ್ರಮೆಂ
ದುಪಮಾಭೇದಮಿವಕ್ಕುಮಂತೆದೊರೆವೆತ್ತರ್ಥಾಂತರನ್ಯಾಸಮುಂ
[4]ಅವಱೊಳಗೆ[4] ॥

---

* ರುದ್ರಟ—VII, 106. 1 ಕಾಣಲಾದುದು (ಅ). † ರುದ್ರಟ—VII, 107, 108. 2 ನೃಪರ (ಅ). 3 ನಾಗಿಯುಂ (ಅ). 4 ಅಂತವರೊಳಗೆ (ಬ).

## ಸೂತ್ರಂ ೧೫೪

* ಉಪಮೇಯಂ ಗುಣಲೇಶದಿ
ನುಪಮಾನಕ್ಕೆಣೆಗೆವರ್ಪೊಡುಪಮೆಯೆನಿಕ್ಕುಂ ।
[1]ವ್ಯುಪಸರ್ಗ[1]ವಿಷಯರೂಪ
[2]ಪ್ರಪಂಚಿತಮನೇಕಭೇದಮದುತಾನಕ್ಕುಂ[2] ॥ ೬೬೬

ಲಕ್ಷ್ಯಂ ॥

ಧರ್ಮೋಪಮೆಗೆ ॥

ಜಲನಿಧಿವೊಲ್ ಗಂಭೀರಂ
ಬಲವೈರಿಯವೊಲ್ ಸಮಗ್ರವಿಭವಸನಾಥಂ ।
ಕುಲಗಿರಿವೊಲ್ ನಿಷ್ಕಂಪಂ
ಬಲಿಯಂತೆವೊಲಧಿಕದಾನಿ ದಾನವಿನೋದಂ ॥ ೬೬೭

ಹೇತೂಪಮೆಗೆ॥

ಪರಿವೃತ್ತತೆಯಿಂ ನುಣ್ಪಿಂ
[3]ಶರಕಾಂಡ[3]ಪ್ರತಿಮಚಾರುಗೌರಚ್ಛವಿಯಿಂ ।
ಪರಿಪಕ್ವತಾಳಫಳದೊಳ್
ದೊರೆಯೆನಿಸುಗುಮವಳ ಘನಪಯೋಧರಯುಗಳಂ ॥ ೬೬೮

ವಸ್ತೂಪಮೆಗೆ ॥

ಅಳಿಕುಳದಂತಳಕಚಯಂ
ದಳಿತಾಂಬುಜದಂತೆ ನಗೆವೊಗಂ ಲಲಿತಾಂಗಂ ।
ಮಿಳಿರ್ವ ಲತೆಯಂತೆ ತಳಮುಂ
ತಳಿರಂತೆ ಬೆಡಂಗುವೆತ್ತು ತೋರ್ಕುಂ ಸತಿಯಾ ॥ ೬೬೯

ಶ್ಲೇಷೋಪಮೆಗೆ ॥

ಸಮ[4]ವೃತ್ತ[4]ಸಂಧಿಲಕ್ಷಣ
ಸಮನ್ವಿತಂ ಜಾತ್ಯಲಂಕೃತಿಭ್ರಾಜಿತಮು ।
ತ್ತಮಕಾವ್ಯಬಂಧ[5]ದಂತಾ[5]
ದಮಿತಾರಿಗೆ ಸಾಜಮೊಪ್ಪುಗುಂ [6]ಕಿಱುದೊಡೆಗಳ್[6] ॥ ೬೭೦

ಅನ್ಯೋನ್ಯೋಪಮೆಗೆ ॥

ತಳಮುಂ ಕೆಂದಳಿರುಂ ಕುಚದ್ವಿತಯಮುಂ ಪೂಗೊಂಚಲುಂ ತೋಳ್ಗಳುಂ
ಸೆಳೆಗೊಂಬುಂ ಕುರುಳೋಳಿಯುಂ ಚಳದಳಿವ್ರಾತಂಗಳುಂ ಕೋಮಳಾಂ।

---

* ದಂಡಿ—II, 14; ಭಾಮಹ—II, 30. 1 ವ್ಯುಪಸರ್ಗ (ಒ.ಅ). 2 ಪ್ರಪಂಚಿತಂ ತಾನನೇಕ ಭೇದಮೆನಿಕ್ಕುಂ (ಅ). 3 ಶರಕಂಥಾ, ಸ್ಮರಕಾಂಡ (ಅ). 4 ವೃತ್ತಿ (ಅ). 5 ದಂದಂ (ಅ). 6 ಕಿಱುದೆಡೆಯೊಳ್ (ಅ).

ಗುಳಿಯುಂ ತತ್ಕಳಿಕಾವಳೀರುಚಿಯುಮಂತೊಂದೊಂದಱೊಳ್ ಪೋಲ್ವೆಯಾ
ಗೆ ಲತಾಕೋಮಳೆ ಸಾರ್ದಶೋಕಲತೆಯಂ ಪೂಗೊಯ್ದು[1]ಳಂತ[1]ಟ್ಟಿಯಿಂ ॥

ವಿಪರ್ಯಾಸೋಪಮೆಗೆ ॥

ಮೊಗಮಂ ತಾವರೆ ಕಣ್ಣನುತ್ಪಲದಳಂ ಧಮ್ಮಿಲ್ಲಮಂ ಸೋಗೆ ಸೆ
ಳ್ಳುಗುರಂ ಕೇದಗೆ ಪುರ್ಬನಂಗಜನ ಬಿಲ್ ದಂತಾಳಿಯಂ ಮುತ್ತು ಕೆ ।
ಯ್ಮುಗಿದಾರಾಧಿಸಿ ಪೋಲ್ತುವೆನ್ನದೆ ಸರೋಜಾತಾದಿನಿಸ್ಸಾರ ವ
ಸ್ತು[2]ಗಳೊಳ್ ಪೋಲಿಪರಂತದೇಂ[2] ಮರುಳರೋ ರೂಪಂ ವಿಚಿತ್ರಾಂಗಿಯಾ॥

ಬಹೂಪಮೆಗೆ ॥

ಶರದಂಬುದಮಂ ಗಂಗಾ
ತರಂಗಮಂ ಸಿಂಧುವಾರಕುಸುಮಶ್ರೀಯಂ ।
ಹರಹಾಸವಿಳಾಸಮನನು
ಕರಿಸುವುದತಿವಿಶದಕೀರ್ತಿ ತೋಳ್ಗೊಪ್ಪುವನಾ ॥ ೭೭೩

ಮಾಲೋಪಮೆಗೆ ॥

ಎಂತು ಬಸಂತಮದರ್ಕೆ ತೆಂಬೆಲರೆಂತದ
ರ್ಕೆಂತು ತಳಿರ್ ತಳಿರ್ಗೆಂತಲರ್ ಕುಸುಮೋತ್ಕರ ।
ಕ್ಕೆಂತಳಿ [3]ಮತ್ತ[3] ಮದಾಳಿಗೆಂತು ನಿನಾದಮಂ
ತಂತೆ ತರಂತರಮೊಪ್ಪಿ ತೋಱಿದಳಗ್ಗಳಂ ॥ ೭೭೪

ಕಲ್ಪಿತೋಪಮೆಗೆ ॥

ಮೃಗಮದಕಲ್ಪಿತಪತ್ರಭಂಗರಮ್ಯಂ
ನಗೆಮೊಗಮುಜ್ಜ್ವಳಕಾಂತಿ ನಾಡೆ ಸೌಮ್ಯಂ ।
ಸೊಗಯಿಸುಗುಂ ಮೃಗಲಾಂಛನಾಭಿರಾಮಂ
ಮೃಗಧರಬಿಂಬಮಿದೆಂಬಿನಂ ನಿಕಾಮಂ ॥ ೭೭೫

ವಾಕ್ಯೋಪಮೆಗೆ ॥

ಪರಮನೊಳಗೊಳಗದೊಂದಂ
ಪರಿ[4]ಜಪನಂ[4]ಗೆಯ್ಯೆ ನೆಗಟ್ದ [5]ಸೂಕ್ತ್ಯವ್ಯಕ್ತಾ[5] ।
ಕ್ಷರದಿಂ ನಿಗೂಢತರನಿ
ರ್ಝರರವಗುಂಜದ್ಗುಹಾಚಳಕ್ಕೆಣೆಯಾದಂ ॥ ೭೭೬

ಪ್ರತ್ಯಯೋಪಮೆಗೆ ॥

ಜಲಜಾಯಮಾನಮಲರ್ಗಣ್
ಪುಲಿನಂಮನ್ಯಂ ನಿತಂಬಮಳಿದೇಶೀಯಂ ।

---

1 ಳಂದ (ಅ). 2 ಗಳಂ ಪೋಲಿಸುವಂತುಟೇಂ. 3 ಮತ್ತ. 4 ಜಪಮಂ (ಅ).
5 ಸೂಕ್ತ್ಯವ್ಯಕ್ತಾ (ಅ).

ಚಲದಳಕಪ್ರತತಿಮ್ಮೃಣಾ
ಳಲತಾಕಲ್ಪಂಗಳಾ[1]ಲತಾಂಗಿಯ[1] ತೋಳ್ಗಳ್ ॥ ೬೭೭

ಸಮಾಸೋಪಮೆಗೆ ॥

ಕಮಲನಯನನಂ ಕಂಬುಗ್ರೀವಂ ಘನಸ್ತನಮಂಡಳಂ
ಭ್ರಮರರುಚಿಮತ್ಕೇಶಂ ಬಿಂಬಾಧರಂ ನಳಿತೋಳ್ ಬೆಡಂ ।
[2]ಗಮದುರ್ಗಾದು[2] ಮೊಗಂ ರಂಭಾಸ್ತಂಭೋರು ತೆಳ್ವಸಿಱುಪ್ಪೆ ವಿ
ಭ್ರಮದ [3]ಕಣಿಯಂ[3] ಪೋಲ್ತರ್ ನಿಲ್ತಲ್ಲಿ ಬೇಡಿತಿಯರ್ ಕೆಲರ್ ॥ ೬೭೮

## ಸೂತ್ರಂ ೧೬೦

ಉಪಮಾ ದೋಷಂಗಳ್ ॥

ಲಿಂಗವಚೋವಿಹಿತವಿಭೇ
ದಂಗಳ್ ನ್ಯೂನಾಧಿಕಂ[4]ಗಳುಂ[4] ಸದೃಶತೆಯಿಂ ।
[5]ಸಂಗತಮಲ್ಲದುವುಂ[5] ದೋ
ಷಂಗಳವುಪಮೆಗೆ ಯಥಾಜನೋದ್ವೇಜನ[6]ದಿಂ[6] ॥ ೬೭೯

ಲಕ್ಷ್ಯಂ ॥

ಲಿಂಗವಚನ ಭೇದಂಗಳ್ಗೆ ॥

ನಿರವದ್ಯಂ ಗತದುರಿತಂ
ಪರಿಪೂತಂ ಜಗದೊಳಿಂತಿವಂ ಗಂಗೆಯವೋಲ್ ।
ಸುರುಚಿರತೇಜಂ ಭಾಸುರ
ತರಸ್ವರಂ ಶಿಖಿಶಿಖಾಕಲಾಪಂಗಳವೋಲ್ ॥ ೬೮೦

ಹೀನೋಪಮೆಗೆ ॥

ಎರಲೆಯ ಪಿಂಡುಗಳಂ ದೆಸೆ
ವರಿವರಿವಿನಮುಳಱೆ ತಗುಳ್ವ ನಾಯಂತೆ ರಣಾ ।
ಜಿರದೊಳಿದಿರ್ಚಿದ ಬಲವ
ದ್ವಿರೋಧಿಸೈನಿಕಮನಾನ್ನೃಪಂ ಬೆಂಕೊಂಡಂ ॥ ೬೮೧

ಅಧಿಕೋಪಮೆಗೆ ॥

ಮುಂಬಿಟ್ಟು ಪರೆದ ಕತ್ತಲೆ
ಯಂ ಬೆದಱೆ ತೆರಳ್ಚಿ ಬೆಳಪ ಬೆಳಗಿಂದೆಸೆದಿ ।
ರ್ಪಂಬುಜಸಖನಂತಿರೆ ಮಾ
ನಂಬುಟು ಬೆಳಗಿದಪುದಖಿಳಗಗನಾಂತರಮಂ ॥ ೬೮೨

---

1 ನತಾಂಸೆಯ. 2 ಗಮದುರ್ಗಾಱು, ಗಮದುರ್ಗಾಟಿ, ಗಮದರ್ಪನಗೆ (ಅ). 3 ಧರಣಿಯ (ಅ); (*a*) ದಂಡಿ—II, 51. 4 ಗಳವು (ಅ). 5 ಸಂಗತಘುುಮಲ್ಲದುವು. 6 ದೊಳ್ (ಓ.ಅ).

ಅಸ್ವಾದ್ಯಶ್ಯಕ್ಕೆ ॥

* ದಾನಾಂಬುಚುಂಬಿತಕಪೋಲತಲಂ ಮದೇಭಂ
ತಾನೊಪ್ಪುವಂತೆ ಸೊಗಯಿಪ್ಪುದು ನೋಡೆ ಪೀನಂ ।
ನಾನಾರುಚಿಪ್ರಚುರಚಾಪಕಳಾಪಕಾಂತಂ
ಸಾನುಪ್ರದೇಶದೊಳುಪಾಗತಮಾ ಮಯೂರಂ ॥ ೭೮೩

† ಲತೆಯೊಳ್ ನಳಿತೋಳ್ ಪಲ್ಲವ
ತತಿಗಳೊಳಧರಂ ಕಲಿಂಕೆಯೊಳ್ ಮೆಯ್ವಣ್ಣಂ ।
ವಿತತಾಂಶುವಪ್ಪ ಹಿಮದೀ
ಧಿತಿಯೊಳ್ ಮೊಗಮುಪಮೆ[1]ವೆತ್ತು ತೊಳಗುವುದವಳಾ[1] ॥ ೭೮೪

## ಸೂತ್ರ ೧೬೧

ಪ್ರತಿವಸ್ತೂಪಮೆ ರೂಪಕಂ

‡ ಪ್ರತಿವಸ್ತೂಪಮೆ ಸಾಮ್ಯ
ಪ್ರತೀತಿಯಿಂದಂ ಸಮಾನವಸ್ತುನ್ಯಸನಂ ।
ಪ್ರತಿಪಾದಿಸುವುದಭೇದಾ
ತ್ಮತೆಯಿಂದುಪಮೆಯನದಲ್ತೆ ರೂಪಕ[2]ಮಕ್ಕುಂ[2] ॥ ೭೮೫

ಲಕ್ಷ್ಯಂ ॥

ಪ್ರತಿವಸ್ತೂಪಮೆಗೆ ॥

§ [3]ನಿನ್ನನ್ನನೊರ್ವನುಂ[3] ಸಂ
ಪನ್ನಗುಣಂ ಪುಟ್ಟಲರಿಯನಿನ್ನುಂ [4]ಮುನ್ನುಂ[4] ।
ಸನ್ನುತನವೇರುಭೂರುಹ
ದನ್ನವು ಪೆಱ[5]ತಾವ[5] ಮರನುಮೇಂ ಪುಟ್ಟುಗುಮೇ ॥ ೭೮೬

ಅಸಮಸ್ತರೂಪಕಕ್ಕೆ ॥

ನೆಲೆಮೊಲೆ ಪೊನ್ನ [6]ಸೊನ್ನಲಗೆಯಾಗೆ[6] ಮೊಗಂ ಸರಸೀಜಮಾಗೆ ಕ
ಣ್ಮಲರಲರಾಗೆ ಕೆಂದಳಮೆ ಕೆಂದಳಿರಾಗೆ ಕನತ್ಕಪೋಳಮು ।
ಜ್ಜ್ವಲಮುಕುರಂಗಳಾಗೆ ದರಹಾಸಮೆ ಸೂಸುವ ರಾಜಿಯಾಗೆ ಕೋ
ಮಲಲಲತಾಂಗಿಯರ್ ನೆರೆದು ನೋಡಿದರಂದಿದಿರ್ಗೊಳ್ವ ಮಾಡ್ಕೆಯಿಂ॥ ೭೮೭

ಸಮಸ್ತರೂಪಕಕ್ಕೆ ॥

ವದನಾಬ್ಜಂ ಕರಪಲ್ಲವೋಪ[7]ನಿಹಿತಂ[7] ಬಾಷ್ಪಾಂಬು[8]ವಿಪ್ಲಾವಿತಂ[8]
ವಿದಳನ್ನೇತ್ರವಿನೀಲನೀರರುಹಮುಷ್ಣೋಚ್ಛ್ವಾಸದಿಂದಂ ಕಱಿಂ ।

---

* ಈ ಪದ್ಯವು ಒಂದು ಪ್ರತಿಯಲ್ಲಿ ಇಲ್ಲ. † ಈ ಪದ್ಯಕ್ಕೆ ಹಿಂದೆ ಒಂದು ಪ್ರತಿಯಲ್ಲಿ "ಅಲ್ಲಿಯಾನುದ್ವಯಕ್ಕೆ" ಎಂದಿದೆ. 1 ಗೆತ್ತುತೋಱುವುವಿವಳಾ (ಓ). ‡ II, 46; II, 66. 2 ಭೇದಂ (ಅ). § ದಂಡಿ—II, 47. 3 ನಿನ್ನವೊಲನ್ನೊರ್ವಂ (ಅ). 4 ಮುನ್ನಂ (ಅ). 5 ತಾದ (ಅ). 6 ಸೊನ್ನಲಗೆಗಳಾಗೆ (ಓ), ಸೊನ್ನೆಗೆಯಾಗೆ, ಸನ್ನತಿಗೆಯಾಗೆ (ಅ). 7 ವಿಹಿತಂ (ಅ). 8 ಲಪ್ಲಾವಿಲಂ (ಅ).

ಗಿದ ವೃತ್ತಾಧರವಿದ್ರುಮಪ್ರತತಿ ಚಿಂತಾಂಭೋಧಿಮಗ್ನಂ ಕರಂ
ಕುದಿಯುತ್ತಿರ್ಪೆರ್ದೆ ಸೂಚಿಕುಂ ವಿರಹದುಃಖಾಕ್ರಾಂತಿಯಂ ಕಾಂತೆಯೊಳ್ ||

ವಿಭಕ್ತರೂಪಕಕ್ಕೆ ||

ಅಂಬುಜಸೂತ್ರಮೆಂಬ [1]ಪೆಣೆದಾವಣಿಯಂ[1] ಪಱಿದಾವಲೆಂಬ ಬಾ
ಳ್ಗಂಬಮನೊತ್ತಿ ಕಿಬ್ಬು ಲತೆಯೆಂಬ ತುರಂಗಮುಮಂ ಪೊರಳ್ಚಿ ಧಾ |
ತ್ರಾಂಬುತರಂಗಮೆಂಬ ಪರಿಕಾಱನನಟ್ಟಿ ಮದಾಳಿಯೆಂಬ [2]ಗುಂ
ಡಂ[2] ಬಟಿಯಟ್ಟಿ [3]ಸೋವುದು[3] ಸಮೀರಣವಾರಣಮಾಪ್ರದೇಶದೊಳ್ || ೬೮೯

ಸಾವಯವರೂಪಕಕ್ಕೆ ||

ಪರಿಲುಳಿತಘರ್ಮಜಲಮಂ
ಜರಿ ವಿಚಲದ್ಭ್ರೂ[4]ಪತಾಕ[4]ಮತಿತರಳತರ |
ಸ್ಫುರಿತಾಧರಪಲ್ಲವಮಿವ
ಳ ರೋಷಮಂ ವಕ್ತ್ರಮಿದೆ ವಲಂ ಕನ್ನಡಿಕುಂ || ೬೯೦

ನಿರವಯವರೂಪಕಕ್ಕೆ ||

ಆರಕ್ತಕಪೋಲಂ ಮದಿ
ರಾರಸಕೃತಸುರಭಿ ಘೂರ್ಣಿತೇಕ್ಷಣಮುದ್ಯ |
ದ್ಭ್ರೂರಮ್ಯಲಾಸ್ಯಮಾಸ್ಯಾಂ
ಭೋರುಹಮೀ ಸುದತಿಗಿಂತಿದೇನೊಪ್ಪಿದುದೋ|| ೬೯೧

ಸಕಲರೂಪಕಕ್ಕೆ ||

ವಾರಿಜಂ ವದನಂ ಬೃಹತ್ಪುಲಿನಂ ನಿತಂಬತಲಂ ಚಲ
ಚ್ಚಾರುಲೋಚನಕಾಂತಿ ಬಾಳೆಗಳೋಳಿ ಹಾರಮೆ ಫೇನವಿ |
ಸ್ತಾರಮಂಚಿತಕುಂಚಿತಾಳಕಮುನ್ಮದಾಳಿಗಳಾಗೆ ಶೃಂ
ಗಾರದೇವನದೀಪ್ರವಾಹಮಿದೊಂ[5]ದೆ ದಲ್ [5]ಪೊಸತೆಂಬಿನಂ || ೬೯೨

ಹೇತುರೂಪಕಕ್ಕೆ ||

ಮೃಗರಾಜಂ ವಿಕ್ರಮದಿಂ
ಖಗರಾಜಂ ಸ್ವಾಮಿಭಕ್ತಿಯಿಂ ನಗರಾಜಂ |
ಮಿಗಿಲಾದ ಪೆಂಪಿನಿಂ ಪ
ನ್ನಗರಾಜಂ ಧೈರ್ಯಗುಣದಿನಾಹವಸಿಂಹಂ || ೬೯೩

ರೂಪಕರೂಪಕಕ್ಕೆ ||

[6]ತರುಣಿಯ ಮುಖೇಂದು[6] ಕಮಲಾ
ಕರದೊಳ್ ದೃಗ್ಗೋಳ[7]ಕಾಂಕ[7]ನೀಳಾಬ್ಜಮಳಂ |

---

1 ಪೆಣದಾಣಣಿಯಂ (ಅ). 2 ನಾಡಂ (ಅ). 3 ಪಾಯ್ವುದು. 4 ಲತಾಕ (ಅ). 5 ದೆನರ್. 6 ತರುಣೀ ಮುಖೇಂದು (ಅ). 7 ಕಾಂತಿ (ಅ).

ಕರಿಸೆ ವಿಟರಾಹುಭೃಂಗಂ
[1]ಬರೆ[1] ಪೀರ್ದತ್ತುಧರಚಂದ್ರಿಕಾಪರಿಮಳಮಂ ॥ ೬೯೪

ಮಾಲಾರೂಪಕಕ್ಕೆ ॥

ಸಂಸಾರಕ್ಕೇಕಸಾರಂ ಬಿದಿಯ ಕುಲಧನಂ ಲೋಕದಾಲೋಕಮಾಧಾ
ರಂ ಸಯ್ಪಿಂಗಕ್ಷಿಗಳ್ಗುತ್ಸವಮೆರ್ದೆಗಮೃತಂ ಕಾಮಸಾಮ್ರಾಜ್ಯಸರ್ವ ।
ಸ್ವಂ [2]ಸೌಂದರ್ಯಕ್ಕೆ[2] ಗೇಹಂ ಮಹಿತಳತಿಳಕಂ ಜಾಣ ಮೆಯ್ಯ್[6] ನಾಣ ಜೀವಂ
ಮಾಂಸಾಶೀ ನಿರ್ನೆರಿಂತಪ್ಪೆಳೆಯಳ[3]ನಿಱಿಯಲ್ಕೆಂತು[3]ನೀನೆತ್ತಿ[4]ಕೊಂಡಯ್[6 4] ॥

ವಿಶೇಷಗುಣರೂಪಕಕ್ಕೆ ॥

ಜಗದಾಲೋಕನದರ್ಪಣಂ ಪ್ರಥಮದಿಕ್ಕಾಂತಾನನಂ ಕಂತುರಾ
ಜಗಜೋದ್ದೀಪನಪಿಂಡಮಂಬರಸರ[5]ಸ್ಸೃತ್ತಂಸ[5]ಹಂಸಂ ವಿಯೋ ।
ಗಿಗಣಾಕೂತಕುರಂಗಪ್ರೋತಭಯಕೃತ್ಕಂಠೀರವಂ ಚೆಲ್ವುವೆ
ತ್ತೊಗೆದತ್ತಂಬುಧಿವೀಚಿ[6]ನರ್ತನನ[6]ಟಂ ಬಿಂಬಂ ಸುಧಾಸೂತಿಯಾ ॥೬೯೬

## ಸೂತ್ರಂ ೧೬೨

ಸಮಾಸೋಕ್ತಿ ಆಕ್ಷೇಪಂ

* ಉಪಮಾನಕಥನವೊಂದಱಿ
ನುಪಮೇಯಮನಱಿವುದದು ಸಮಾಸೋಕ್ತಿ ನಿಷೇ ।
† ಧಪರಂ ತಾನೆಂಬಂತಾ
ಗೆ ಪೇಟ್ಟುದಾಕ್ಷೇಪಮಕ್ಕುಮದು ಬಹುರೂಪಂ ॥ ೬೯೭

ಲಕ್ಷ್ಯಂ ॥

ಸಮಾಸೋಕ್ತಿಗೆ॥

ಫಳತರುಗಳ್ ಪಲವುಂ ಬನ
ದೊಳಗೆ [7]ಸುರೋರ್ವೀರು[7]ಹಪ್ರಕಾಶಂಗಳ್ ತಾ ।
ವೊಳವಾದೊಡಮೆಂತುಂ ಬಗೆ
ಗೊಳಿಸಿದವುದಿದೊಂದೆ ನೂತಚೂತಕುಜಾತಂ ॥ ೬೯೮

ಆಕ್ಷೇಪಕ್ಕೆ ॥

ಒಡನಮೃತಂ ಜನಿಯಿಸೆ ಪಾ
ಲ್ಗಡಲೊಳ್ ವಿಧು ಪುಟ್ಟಿದಂ ಕಳಾಮಯನೆಂಬೀ ।

---

1 ಪರಿ (ಅ). 2 ಸೌಂದರ್ಯೈರ್ಕ. 3 ನಱಿವುತ್ತಿಂತು, ನಱಿಯಲ್ಕೆಂತು (ಅ), ದಱಿಯುತ್ತಿಂತು (ಅ), 4 ಕೊಂಡಾ (ಅ). 5 ಸ್ಸೃತ್ತುಂಗ (ಅ). 6 ನರ್ತಕಿ (ಓ).
* ರುದ್ರಟ—VIII, 67. † ದಂಡಿ—II, 120. 7 ಸುರಾವನಿರುಹ (ಓ).

ನುಡಿ ಪುಸಿ ಜಡಾತ್ಮಕಂ ವಿಷ
ದೊಡನೆ ವಿಷಾಕರದೊಳೊಗೆದ[1]ನೆಂಬುದೆ[1] ತಥ್ಯಂ ॥ ೭೯೯

ಅಂತುಮಲ್ಲದೆಯುಂ ॥

ಪೊಗಟಲ್ಕಾ ನೃಪನಂ ನಾ
ಲಗೆಯೊಂದಱ ಮನುಜರಿರ್ಕೆ ನೆಱೆಯೆನಣಂ ವಾ ।
ಸುಗಿಯುಂ ಪವನಾಧ್ವಮನಾ
ವಗಮಾವಂ ವ್ಯಾಸದಿಂದಮಳೆಯಲ್ ನೆಱೆವಂ ॥ ೭೦೦

## ಸೂತ್ರಂ ೧೬೩

* ಪೊಸಯಿಸುವರ್ಥ[2]ಕ್ರಿಯೆಯಿಂ[2]
ಪ್ರಸಿದ್ಧವಸ್ತುವಿನ ದೊರೆಗೆ ವರೆ ಸಾಮ್ಯಂ † ಮ ।
ತ್ತಸಮಾನವಿಶೇಷಣಗುಣ
ಲಸಿತಂ ಸಮವೃತ್ತಮಪ್ಪುದು ಪರಾಖ್ಯಾನಂ ॥ ೭೦೧

(ಸಾಮ್ಯಂ ಪರಾಖ್ಯಾನಂ)

ಲಕ್ಷ್ಯಂ ॥

ಸಾಮ್ಯಕ್ಕೆ ॥

ಸಕಲಾರ್ಥಿಮನೋರಥದಾ
ಯಕಂ ಮಹೋದಾತ್ತಮೂರ್ತಿ ಸಾಂದ್ರಚ್ಛಾಯಂ ।
[3]ಸುಕರಾಭಿಗಮಂ[3] ನರಪಾ
ಲಕನಿರೆ ಕಲ್ಪಾವನೀಜಮೇಗೆಯ್ದಪುದೋ ॥ ೭೦೨

ಪರಾಖ್ಯಾನಕ್ಕೆ ॥

‡ ವಿಕಚಸರಸೀರುಹಂ ಕೋ
ಕಕುಳವ್ಯಾಭಾಸಿ ಪೂಗೊಳಂ ತಾನಿರೆಯುಂ ।
ಬಕನಿಕರಲುಳಿತಕಲುಷೋ
ದಕವಿರಳದೊಳಂಚೆ ಬೆಂಚೆಯೊಳ್ ವಸಿಯಿಕುಮೋ ॥ ೭೦೩

## ಸೂತ್ರಂ ೧೬೪

§ [4]ಎಂತುಟು ಮುನ್ನಂ ಪೇೞ್ದ[4]
ರ್ಥಾಂತರಮಂತುಟನೆ ಬಟಿಕೆ ತೋಱುವುದದು ದೃ ।
ಷ್ಟಾಂತಂ ‖ ಪ್ರಶ್ನಾರ್ಥದೊಳೋ
ರಂತನುಗುಣಮಾಗೆ ಪೇೞ್ವುದುತ್ತರಮೆನಿಕುಂ ॥ ೭೦೪

(ದೃಷ್ಟಾಂತಂ ಉತ್ತರಂ)

---

1 ನೆಂಬಿಡೆ (ಒ). * ರುದ್ರಟ—VIII, 105. 2 ಕ್ರಿಯೆಯುಂ, ಕ್ರಿಯೆಯಂ (ಅ). † ರುದ್ರಟ—VIII, 74. 3 ಶುಕರಾಜಿಗಮಂ (ಒ). ‡ ರುದ್ರಟ—VIII, 75. ಅನ್ಯೋಕ್ತಿಗೇ ಪರಾಖ್ಯಾನವೆಂದು ಹೆಸರು. § ರುದ್ರಟ—VIII, 94. 4 ಎಂತುಂ, ಮುಂಪೇೞ್ದ (ಒ). ‖ ರುದ್ರಟ—VIII, 72.

ಲಕ್ಷ್ಯಂ ||

ದೃಷ್ಟಾಂತಕ್ಕೆ ||

* ಭವದಾಲೋಕನದಿಂದಾ
ಯ್ತು ವಳ್ಗೆ ಪಿರಿದುಂ ಮನೋವಿಕಾ[1]ಸಮಧೀಗಳ್[1] |
ಕುವಲಯಬಂಧುವಿನಾಲೋ
[2]ಕವೆ ಮಾಡುವುದಲ್ತೆ[2] ಕುಮುದವನವಿಕಸನಮಂ || ೭೦೫

ಪತಿಯುಂ ಪಿಂಬಡಿನೊಳ್ ಪತಿವ್ರತೆಗೆ ಬೇಱೊಂದುಂಟೆ ಕೃತ್ಯಂ ವಿರಾ
[3]ಗತೆಯುಂ[3] ಮೇಣ್ ತದನುಪ್ರಯಾಣ[4]ವಿಧಿಯುಂ[4] ತಾವಲ್ಲದೆಂದಿಂತಿದಂ |
ಕ್ಷಿತಿಗೆಲ್ಲಂ ತಿಳಿವಾಗೆ ತೋರ್ಪ ತೆಱದಿಂ ರಾಗೋದಯಂ ಪಿಂಗೆ ಸಂ
[5]ಗತೆ[5] ಸಂಧ್ಯಾಂಗನೆ ಪೋದ[6]ಳಾದೊಲವಿನಿಂ[6] ಬೆನ್ನೊಳ್ ದಿನಾಧೀಶನಾ ||

ಉತ್ತರಕ್ಕೆ ||

† ಮರಣವೆನಿಪ್ಪುದಾವುದು ದರಿದ್ರತೆ ಪತ್ತಿದ ಕುತ್ತಮಾವುದಂ
ತರಿಸದೆ ನಿಂದ ಚಿಂತೆ ಸುಖಮಾವುದು ಪುತ್ರಮುಖಾವಲೋಕನಂ |
ನರಕದ ದುಃಖಮಾವುದವಿನೀತಕಲತ್ರಮುದಾತ್ತಮಪ್ಪಲಂ
ಕರಣಮದಾವುದಗ್ಗಳಿಕೆವೆತ್ತ [7]ಗುಣಂಗಳೆ ಭೂತಳಾಗ್ರದೊಳ್[7] || ೭೦೭

## ಸೂತ್ರಂ ೧೬೫

ಸಂಶಯಂ ಭ್ರಮಂ ಅಪಹ್ನುತಿ

ಮಾತೇನೊ ಸಂಶಯಂ [8]ಸಂ
ಶೀತಿ[8]ಪರಂ ಚಿತ್ತಮೋಹನಂ ಭ್ರಮಮಕ್ಕುಂ |
ಭೂತಾರ್ಥಾಪಹ್ನವ[9] ಸಂ
ಭೂತ[9]ಮದನ್ಯಾರ್ಥದೃಷ್ಟ್ಯಪಹ್ನುತಿನಾಮಂ || ೭೦೮

ಲಕ್ಷ್ಯಂ ||

ಸಂಶಯಕ್ಕೆ ||

ಅಳಿಗಳೊ ನೀಳ್ದ ಕಬೊರ್ಗೆಯೊ ಕೆಂದಳಿರೋಳಿಯೊ ಸುತ್ತುಗೊಂಡು ತ
ಳ್ತಳುರ್ವುರಿಮಾಲೆಯೋ ಸರಸಪಕ್ವಫಲಂಗಳೊ ವಿಸ್ಫುಲಿಂಗಸಂ |
ಕುಳಮೊ ಮನಕ್ಕೆ ಸಂದೆಯಮಗುಂದಲೆಯಾಗಿರೆ ನೋಡಿನೋಡಿ ಕಂ
ಟಳಿಸುವುದೆನ್ನ ಮೆಯ್ ಕೆಳದಿ[10]ಪೇಟಿದು[10]ಮಾಮರನೋ ದವಾಗ್ನಿಯೋ ||

---

* ರುದ್ರಟ—VIII, 95. 1 ಕಾರಮುದಾ. 2 ಕವಲ್ತೆಮಾಡುವುದು (ಅ). 3 ಗತೆಯಿಂ. 4 ವಿಧಿಯಿಂ. 5 ಗತಿ. 6 ಳೊಂದೊಲವಿನಿಂ (ಅ). † ರುದ್ರಟ—VIII, 73. 7 ಗುಣಂ ಸುಜನೈಕಬಾಂಧವಾ (ಅ). 8 ಸಂಭೀತಿ (ಓ), ಸಂಭೀತ (ಅ). 9 ಸಂಪೂತ, ಸಂಘಾತ (ಅ). 10 ಕೇಳಿದು (ಅ).

ಭ್ರಮಕ್ಕೆ ||

ಮಣಿಭವನಂಗಳ ರುಚಿಗಳ್
ಪೆಣೆದು ನಭೋಂಗಣದೊ[1]ಳಿಂದ್ರ[1]ಚಾಪವಿಳಾಸ |
ಕ್ಕೆಣೆಯಾಗಿರೆ ಬಹುವಿಧದಿಂ
ಕುಣಿವುವು ಕಾರ್ಗೆತ್ತು ಕೇಗಿ ಸೋಗೆನವಿಲ್ಗಳ್ || ೭೧೮

ಕವಿವ ಕುಬೇರಧೂಪದ ಕವಿಲ್ಪೊಗೆಯಂ ನವಮೇಘಮಾಲಿಕಾ
ನಿವಹಮೆಗೆತ್ತು ತೋರ್ಪ ಮಣಿದೀಧಿತಿಯಂ ಕುಡು[2]ಮಿಂಚೆ[2]ಗೆತ್ತು ಪೊ |
ಣ್ಮುವ ಪಟಹಪ್ರಣಾದಮನೆ ಮೇಘನಿನಾದಮೆಗೆತ್ತು ಕಾಲತಾಂ
ಡವಮನೊಡರ್ಚುಗುಂ ಶಿಖಿಕುಳಂ ಕನಕಾಯತಕೂಟಕೋಟಿಯೊಳ್ || ೭೧೯

ಅಪಹ್ನುತಿಗೆ ||

ಉನ್ಮದಮಧುಕರಕುಳರಸಿ
[3]ವನ್ಮೃದು[3]ಝುಂಕಾರನಿನದಮ[4]ಲ್ತಿದು[4] ಪೀನಂ |
ಮನ್ಮಥಚಾಪವಿ[5]ಮುಕ್ತೋ[5]
ದ್ಯನ್ಮಾರ್ಗಣಝೇಂಕೃತಿಸ್ವನಂ ತಾನಕ್ಕುಂ || ೭೨೦

## ಸೂತ್ರಂ ೧೬೬

ವ್ಯಪದೇಶಂ
ಸ್ಮರಣಂ

[6]ಉಪಮೇಯಮನ್ಯಗ್ಯಾಪೋ
ಪಪನ್ನ[6]ಮುಪಮಾನಮಾಗೆ ಮುಖ್ಯಮದಕ್ಕುಂ |
ವ್ಯಪದೇಶಂ ಮುಂ ಪೋದುದ
ನಪೂರ್ವಮಂ ಕಂಡು ನೆನೆವುದದು ತಾಂ ಸ್ಮರಣಂ || ೭೨೧

ಲಕ್ಷ್ಯಂ ||

ವ್ಯಪದೇಶಕ್ಕೆ ||

ಕುಚಯುಗಳಚ್ಛಲದಿಂದೊಂ
ದಿ ಚಕ್ರವಾಕದ್ವಯಂ ಭುಜವ್ಯಾಜಲತಾ |
ರುಚಿಗಳೊಳಿರ್ದಪ್ಪುವು ನಾ
ಡೆ ಚೆಲ್ವುವೆತ್ತಾಸ್ಯಮಿಷಸರಃಪರಿಸರದೊಳ್ || ೭೨೨

ಸ್ಮರಣಕ್ಕೆ ||

ಮನಕಂ ಪಕ್ಕಲ್ಲದೆ [7]ನೆಲ
ನಿನಿಸಾನುಂ ಮೆಚ್ಚೆ[7] ಕರ್ಣನಂ ನೋಡಿ ನರಂ |

---

1 ಳಮರ (ಅ). 2 ಮಿಂಚು (ಅ). 3 ವನ್ಮಧು (ಅ). 4 ಲ್ಲದು (ಓ). 5 ವಿಯುಕ್ತೊ (ಓ). 6 ಉಪಮೆಯನನ್ಯದ್ವಾಪೋದ್ಯುಪನ್ನ (ಓ.ಅ). 7 ನೆಲಗಿನಿ ಸಾನುಂ ಮೆಚ್ಚಿ (ಅ).

ನೆನೆದಂ ತನ್ನೊಳ್ ತಾಗಿದ
ಪಿನಾಕಪಾಣಿಯ ಕಿರಾತತನುಸೌಷ್ಠವಮಂ ॥ ೭೧೫

ವಿಶಾಳಮಳಿನೋಗ್ರತುಂಗಗಿರಿಕುಂಜಸಂಜಾತಮ
ಪ್ಪಶೋಕವನದಲ್ಲಿ ಧಾತುಜಳನಿರ್ಝರಂ ಪಾಯೆ ಮಾಂ ।
ಸಶೋಣಿತಮಯಂಬೊಲಾಗಿ ಕಿಱುಸಂತರಂ ತೋಱೆ ಕಂ
ಡು ಶಾರ್ಙ್ಗ ನೆನೆದಂ ಹಿರಣ್ಯಕನದೊಂದು ಬಿಟ್ಟಂದಮಂ ॥ ೭೧೬

## ಸೂತ್ರಂ ೧೬೭

* [1]ಅನುಕಂಪೆಯಕ್ಕೆ[1] ಮೇಣ್ ಕು
ತ್ಸನಮುಪಮೇಯಸ್ಥಿತಂ ಪ್ರತೀಪಂ ಗೆಡೆಗೊಂ ।
[2]ಡನುಗತ[2]ಮಾಗಿರೆ ಗುಣದೋ
ಷನಿರೂಪಣದಿಂ ವಿಭಾಗ[3]ಮದು ಸಮ[3]ಯೋಗಂ ॥ ೭೧೭

ಪ್ರತೀಪಂ ಸಮಯೋಗಂ

ಲಕ್ಷ್ಯಂ॥

ಪ್ರತೀಪಕ್ಕೆ ॥

† ಅಮಲಿನಮಾಗಿಯುಮಿಾ ನಿ
ನ್ನ ಮೊಗಂ ಮೃಗಲಕ್ಷ್ಮನೆಣೆಗೆ ವಂದಪುದಿನಿಸಂ ।
ಕಮಲಾಯತಾಕ್ಷಿ ಕಜ್ಜಲ
ವಿಮಿಶ್ರಿತಾಶ್ರುಬಿಂದುಮಲಿನಕಪೋಲಂ ॥ ೭೧೮

ಅಸಿತೋತ್ಪಳದಳಶೋಭೆಯ
[4]ನೆಸೆಯೆ[4] ಕಟಾಕ್ಷದೊಳೆ [5]ತಳೆದ[5] ಮದದಿಂದಾಲೋ ।
ಕಿಸದಿರು ಮುಯ್ವಂ ಮಾನಿನಿ
ದೆಸೆದೆಸೆಗಳೊಳೊಳವು ಕುವಲಯಾಕರ[6]ಮೆನಿತುಂ[6] ॥ ೭೧೯

ಸಮಯೋಗಕ್ಕೆ ॥

‡ ಮೃಗನಯನೆಯರೊಲವುಂ ಬ
ಳ್ಳಿಗೊಂಡು ತಳ್ತಡರೆ ಪೊಳೆದು ಮಿಂಚುವ ಮಿಂಚುಂ ।
ಬಗೆವಾಗಳ್ ನಿಲ್ಲವದೊಂ
ದು ಗಟಿಗೆಯುಂ ಘನನಿಬದ್ಧಮೆನೆ ಸಂದಿರ್ದುಂ ॥ ೭೨೦

* ರುದ್ರಟ—VIII, 76. 1 ಅನುಕಂಪಮಕ್ಕೆ (ಅ). 2 ಡನುಮಾತ (ಅ). 3 ಮುರುಸಹ (ಓ). † ರುದ್ರಟ—VIII, 77. 4 ನೆಸೆವ (ಅ). 5 ತಳೆದು. 6 ಮೆಸೆಗುಂ. ‡ ದಂಡಿ—II, 332.

## ಸೂತ್ರಂ ೧೬೮

* ಬಗೆದಿರ್ದು ಬೇಱದೊಂದಂ
ಪೊಗೞ್ವುಂದಪ್ರಸ್ತುತಪ್ರಶಂಸೆಯೆನಿಕ್ಕುಂ।
ನೆಗೞ್ದೆ ನುಡಿವುದನೆ ಸಾಧಿಸಿ
ನಿಗದಿಪುದರ್ಥಾಂತರಪ್ರಸಂಗನ್ಯಾಸಂ॥ ೬೨೧

(ಅಪ್ರಸ್ತುತ ಪ್ರಶಂಸೆ; ಅರ್ಥಾಂತರನ್ಯಾಸಂ)

ಲಕ್ಷ್ಯಂ ॥

ಅಪ್ರಸ್ತುತಪ್ರಶಂಸೆಗೆ ॥

† ಮೃದುಹರಿತಪ್ರವಾಳನವಶಾದ್ವಲರಾಜಿಯನಾಯ್ದು ಮೇದು ತ
ಣ್ಪೊದವಿದ ನಿರ್ಝರಾಂಬುಗಳನೊಯ್ಯನೆ ಪೀರ್ದು ನಿಜಾಂತರಂಗದೊಳ್ ।
ಪುದಿದನುರಾಗದಿಂದೆಳಸಿ ಪುಲ್ಲೆಗಳಾರೊಳವೆಂದು ದೈನ್ಯಮಿ
ಲ್ಲದೆ ಸುಖಮಿರ್ಪುವೀ ವನನಿಕುಂಜವಿಭಾಗದೊಳೇಣಸಂಕುಳಂ॥ ೬೨೨

ಅರ್ಥಾಂತರನ್ಯಾಸಕ್ಕೆ ॥

ಜಗದೊಳುಳ್ಳ ನದೀಪ್ರವಾಹಜಲಂಗಳ[1]ೊಟ್ಟುಕ್ಕುಡಿ[1]ದಾವಗಂ
ಪುಗೆಯುಮೊತ್ತದು ಮೇರೆಯಂ ಬಡಬಾನಳಂ ಬಿಡದಾಗಳುಂ ।
ತಗುಳೆ ಪೀರೆಯುಮಂತದೆಳ್ಳನಿತಪ್ಪುಡಂ ತವದಂತೆವೋಲ್
ಬಗೆದು ನೋಡೆ ಮಹಾತ್ಮರಪ್ಪವರೇಕರೂಪರದೆಲ್ಲಿಯುಂ ॥ ೬೨೩

ರೂಪದರ್ಪನಾರಿಯಾಯ್ತು ವಿ
ರೂಪಾಕ್ಷಂಗೆಂತು ಶಾಂತರೌದ್ರಾತ್ಮಕಮೀ ।
ರೂಪು ನಿನಗಾದು[2]ದಂತೆ[2] ಮ
ಹಾಪುರುಷರ ಚರಿತಮಪರತಂತ್ರಮಚಿಂತ್ಯಂ ॥ ೬೨೪

ಇವು ಉಪಮಾಭೇದಂಗಳ್ ॥

## ಸೂತ್ರಂ ೧೬೯

ನಾಡಾಡಿಗೞವಿನಂ ಕೆ
ಯ್ಗೂಡಿದ ವಸ್ತೂಪವರ್ಣನಂ ವಿಸ್ಮಯಮಂ ।
ಮಾಡುವೊಡತಿಶಯಮಕ್ಕುಂ
ನಾಡೆಯುಮಿದಱಿಂದಮಾವುದುಂ ಬಗೆಗೊಳಿಕುಂ ॥ ೬೨೫

(ಅತಿಶಯಂ)

---

* ದಂಡಿ—II, 340 ; II, 169. *Cf.* ರುದ್ರಟ—VIII, 79. † ದಂಡಿ—II, 341. 1 ಳೊಳ್ಪುದಿ (ಅ). 2 ದೆಂತು (ಅ).

## ಸೂತ್ರಂ ೧೭೦

ಅತಿಶಯ ಭೇದಂಗಳ್

* ವಿರೋಧಮುತ್ಪ್ರೇಕ್ಷೆವಿಭಾವನಾಹ್ವಯಂ
ತಿರೋಹಿತಂ ಪೂರ್ವಮಹೇತು ತದ್ಗುಣಂ ।
ಪರಸ್ಪರಾಸಂಗತಿಕಂ [1]ವಿಶೇಷಮುಂ[1]
ನಿರೂಪ್ಯಮಾಣಾತಿಶಯಪ್ರಭೇದಮುಂ ॥ ೭೨೬

ಅಲ್ಲ ॥

## ಸೂತ್ರಂ ೧೭೧

ವಿರೋಧಂ ಉತ್ಪ್ರೇಕ್ಷೆ

† ಅನ್ಯೋನ್ಯವಿರುದ್ಧಪದಾ
ರ್ಥನ್ಯಾಸಮೆ ತಾಂ ವಿರೋಧಮವಿವಕ್ಷಿತಸಾ ।
ಮಾನ್ಯಮತದ್ಗುಣಯೋಗದಿ
ನನ್ಯತ್ವಾರೋಪಮಪ್ಪುದುತ್ಪ್ರೇಕ್ಷೆ ವಲಂ ॥ ೭೨೭

ಲಕ್ಷ್ಯಂ ॥

ವಿರೋಧಕ್ಕೆ ॥

ಮರದುಱುಗಲ ಕಟ್ತಲೆಯುಂ
ಪರಕಲಿಸಿ ಪೊದಳ್ದ ಶೋಣಮಣಿದೀಧಿತಿಯುಂ ।
ನೆರೆದಿರ್ದುವೊಂದನೊಂದೊ
ತ್ತರಿಸಲ್ ನೆಱೆ ನೆಱೆಯವೀ ಮಹೀಧರತಟದೊಳ್ ॥ ೭೨೮

ಘನಜಘನಂ ತನುತನು ನಿ
ಮ್ನನಾಭಿ ತುಂಗಸ್ತನಂ ವಿನೀಲಿಮಕೇಶಂ ।
ಕನದರುಣ[2]ದಶನ[2]ವಸನಂ
[3]ಮನದೊಳ್[3] ಭಾವಿಸೆ ವಿರುದ್ಧಮಿವಳಾಕಾರಂ ॥ ೭೨೯

ದಶರಥನಾಗಿಯುಂ ದಶಸಹಸ್ರರಥಂ ರವಿವಂಶನಾಗಿಯುಂ
ಶಶಧರಕೀರ್ತಿರೂಪನಿನನಾಗಿಯುಮಸ್ತಮಯಾಪವರ್ಜಿಕ ।
ರ್ಕಶಬಲನಾಗಿಯುಂ ಮೃದುವಪುಃಪ್ರಸರಂ ಮತಿತೀವ್ರನಾಗಿಯುಂ
ಪ್ರಶಮಿತಚಿತ್ತನೆಂತುಮವಿರುದ್ಧಗುಣಂ ಗುಣವಜ್ಜನಸ್ತುತಂ ॥ ೭೩೦

ಅತಿಸೂಕ್ಷ್ಮೇಕ್ಷಣನೆಂತುಮಂಧನಸತೀಸೌಂದರ್ಯದೊಳ್ [4]ಸತ್ಕ್ರಮಾ[4]
ನ್ವಿತನೆಂತುಂ ಪೆಟವಂ ಮಹಾಜಿಮುಖದೊಳ್ [5]ನಿರ್ಣೀತ[5]ಸಮ್ಯಗ್ಬಹು ।
ಶ್ರುತನೆಂತುಂ ಬಧಿರಂ ಕರಂ ಪರಪರೀವಾದಂಗಳೊಳ್ ನೋಡ್ಪೊಡ
ದ್ಭುತಮಾಶ್ಚರ್ಯಮಭೂತಪೂರ್ವಮೆನಸಕಂ ಶ್ರೀಗಂಡಮಾರ್ತಂಡನಾ ॥ ೭೩೧

---

* ರುದ್ರಟ—IX, 2; IX, 30. 1 ವಿಶೇಷ್ಯಮಂ, ವಿಶೇಷ್ಯಮುಂ (ಅ).
† ಭಾಮಹ—II, 91. 2 ದಂಶ (ಅ). 3 ಮನ್ಕೆ (ಅ). 4 ವಿಕ್ರಮಾ (ಅ).
5 ನಿರ್ಣಿಕ್ತ (ಅ).

ಉತ್ಪ್ರೇಕ್ಷೆಗೆ ॥

ಇರದೆ ನಿತಂಬವೆಂಬಪಿನಿವಾಸ[1]ದಿನೀಕೆಯ[1]ರೋಮರಾಜಿಯೆಂ
ಬುರಗನಳುರ್ಕೆಯಿಂ ಮೊಗಮನೊಪ್ಪುವ ಚಂದ್ರನೆಗೆತ್ತು ಕೋಪದಿಂ ।
ಬರೆ ಬರಲೀಯದತ್ತ ಮೊಲೆಗಳ್ ತಡೆದಿರ್ದಪುವೆಂದು ಪರ್ಚುವಂ
ತಿರ ಕಿವಿಯೊಳ್ ಬೆಡಂಗಿಡಿದು ತೋರ್ಕುಮಪಾಂಗದ ನೋಟಮಾಕೆಯಾ ॥

ಎಳೆಯಳ ಮೊಗದ ನೆಟಲ್ ತ
ನ್ನೊಳಗಿರೆ ಸಂತಸದೆ ಬೀಗಿದಂತಿರ್ದ ಕುಚಂ ।
ಗಳ ಮಱೆಯೊಳ್ ಕಾಣದೆ ಮೊಗ
ದಳವಂ ನಡು ನೆನೆದು ಬಡಬಡಾದಂತಿರ್ಕುಂ ॥ ೭೩೩

ವಾಸರಪತಿ ಬಿಸುಗದಿರಿಂ
ಪೇಸದೆ ತವೆ ಪೀರ್ಗುಮೆಂಬ ಮಱುಕದಿನಂಭೋ ।
ಜಾಸನನಂಬುಜವನಮಂ
ಬಾಸಣಿಸಿದನೆನಿಪುವೆಸೆವ ತಾವರೆಯೆಲೆಗಳ್ ॥ ೭೩೪

ನೀಲಿಯ [2]ರಸದೊಳ್[2] ಕರಡಿಯ
ತೋಲಂ [3]ತೊಯ್ದುದ್ದಿ[3] ಮಸಿಯೊಳದಱೊಳ್ [4]ಪುದಿದ[4] ।
ತ್ರೈಲೋಕಮಕ್ಕುಮೆನಿಸಿ
ತ್ತಾಲೋಕವಿರೋಧಿ ಬಹಳತಮಸಂತಮಸಂ ॥ ೭೩೫

## ಸೂತ್ರಂ ೧೮೨

ವಿಭಾವನೆ
ತಿರೋಹಿತಂ

* ಕ್ರಿಯೆಯಂ ಪ್ರತಿಷೇಧಂಗೆಯೆ
ನಿಯತ[5]ಫಳ[5]ವ್ಯಕ್ತಿಯದು ವಿಭಾವನೆಯೇಕಾ ।
ಶ್ರಯಮನದೊಂದಂ ಗುಣದತಿ
ಶಯಂ ತಿರೋಹಿಸೆ ತಿರೋಹಿತಂ ತಾನಕ್ಕುಂ ॥ ೭೩೬

ಲಕ್ಷ್ಯಂ ॥

ವಿಭಾವನೆಗೆ ॥

ಸಮಱದೆ ಕೊಂಕಿ ನೀಳ್ದಸಿಯ ಪುರ್ವುಗಳೆಚ್ಚದೆ ನಾಡೆಯುಂ ಬೆಡಂ
ಗಮರ್ದಸಿತಾಕ್ಷಿಯುಗ್ಮಮಡಿಯೂಡದೆ ಕೆಂಪೆಸೆದಿರ್ದ ಕೆಂದಳಂ ।
ಭ್ರಮರಕುಳಪ್ರ[6]ಭಾಸಿ[6] ಕುಟಿಲಾಲಕಮೊತ್ತದೆಯುಂ ನಿಸರ್ಗದಿಂ
ತಮಗೆನೆ ಗಾಡಿ ಕೆಯ್ಗಟಿಯೆ ಬರ್ಪ ಲತಾಂಗಿಯರಾದಮೊಪ್ಪಿದರ್ ॥ ೭೩೭

---

1 ದೊಳೀಕೆಯ (ಅ). 2 ರಸದಿಂ (ಅ). 3 ತೊಯ್ದುಟ್ಟಿ (ಅ), ತೊಯ್ದುರ್ದ (ಓ). 4 ಪುಟ್ಟಿದ (ಓ). * ಭಾಮಹ—II, 77; ರುದ್ರಟ—IX, 50. 5 ಪದ (ಓ.ಅ). 6 ಹಾಸಿ (ಓ.ಅ).

* [1]ಅಕುಪಿತ[1]ಕಲುಷಿ ಜಲಮಪಾ
ನಕಪ್ರಮತ್ತಂ ಶಿಖಂಡಿಸಂತಾನಮಹೇ ।
ತುಕಸುರಭಿ ನೀಪವಿಪಿನಂ
ಸಕಳಮಹೀತಳದೊಳಾದುದಂದೊರ್ವೊದಲೊಳ್ ॥ ೭೩೮

ತಿರೋಹಿತಕ್ಕೆ ॥

† ಇನಿಯನ ವಿಯೋಗದಿಂದಾ
ದ ನಿನ್ನ ಬಡತನಮನಱಿಯಲಾಗದ [2]ದಿನಿಸುಂ[2] ।
ಘನತರಚಂದ್ರಕಲಾಭಿಷ
ವನಿಕಾಶಸ್ವತನುಕಾಂತಿಯಿಂ ತರಲಾಕ್ಷೀ ॥ ೭೩೯

ಕಾಳಿಂದಿಯ[3]ಸಿತಜಲದೊಳ[3]
ಗೋಲಾಡುವ ಕೃಷ್ಣನಂ ಸವರ್ಣತೆಯಿಂ ಗೋ ।
ಪಾಲಕುಮಾರರ್ ನೋಡಿಯು
ಮಾಲೋಲಮನಸ್ಕರಱಿಯ[4]ದಾಕುಲ[4]ಮುತ್ತರ್ ॥ ೭೪೦

## ಸೂತ್ರಂ ೧೭೩

ಪೂರ್ವಂ
ಅಹೇತುಕಂ

‡ ಜನಿಯಿಸೆ ಮುನ್ನಂ ಜನ್ಯಂ
ಜನಕದಿನದು ಪೂರ್ವಮೆಂಬುದಕ್ಕುಂ ಮತ್ತಂ ।
ಸ್ವನಿಮಿತ್ತದೊಳಂ ಕಾರ್ಯಂ
ಜನಿಯಿಸದಿರ್ಪಿರವಹೇತುಕಂ ಪೆಸರಕ್ಕುಂ ॥ ೭೪೧

ಲಕ್ಷ್ಯಂ ॥
ಪೂರ್ವಕ್ಕೆ ॥

ಸಂದಿಸೆ [5]ಗಱಿ[5] ಸಂದಿಸೆ ರಘು
ನಂದನನೆಡೆಗಿಱಿದು ಕವಿವ ಕಣೆಯಿಂ ಮುನ್ನಂ ।
ಬಂದುದು ನೆಲಕ್ಕೆ ರಿಪುಭಟ
ವೃಂದಂ ಬಟಿಯಿಂ ನಿಶಾತವಿಶಿಖ[6]ಪ್ರಸರಂ[6] ॥ ೭೪೨

ಸ್ಮರನ ಶರಂಗಳಿವೆನೆ ತರ
ತರದಿಂ ಪೊರೆನೆಗೆದು ಮೆಲ್ಲಮೆಲ್ಲನೆ ಬಟಿಯಂ ।
ಬಿರಿದುವು ಮಲ್ಲಿಗೆ [7]ಮುನ್ನಮೆ[7]
ಬಿರಿದುವು ಬಿಬ್ಬರನೆ ಬಿರಯಿಜನದಳ್ಳೆರ್ದೆಗಳ್ ॥ ೭೪೩

---

* ಭಾಮಹ—II, 78. 1 ಅಕುಟಿಲ (ಅ), ಅಕುಟಿತ (ಓ). † ರುದ್ರಟ—IX, 51. 2 ದೆನಸುಂ (ಅ.ಓ). 3 ನಡುನೀರೊಳ್ (ಓ.ಅ). 4 ರಾಕುಲ (ಅ). ‡ ರುದ್ರಟ—IX, 3 ; IX, 54. 5 ಗಱಿ (ಓ). 6 ಪ್ರಕರಂ (ಅ). 7 ಮುನ್ನಂ (ಅ).

ಅಹೇತುಕಕ್ಕೆ ॥

ಪೆತ್ತುಂ ತೆಳ್ಪಟಿಯುದ ನಡು
ಮುತ್ತುಂ ಬೀಟದ ಪಯೋಧರಂ ಮುನಿದುಂ ಚೆ ।
ಲ್ವೆತ್ತಿರಿಪ ನಗೆಮೊಗಂ ಮೆ
ಯ್ವೆತ್ತಿರೆ ಕರಮೊಪ್ಪಿದಪ್ಪರಲ್ಲಿಯ ಪೆಂಡಿರ್ ॥ ೭೪೪

* ಸಕಲುಷವಿಕೃತಾಶಯರೊಳ
ಮಕೋಪನಂ ಕುಟಿಲವೃತ್ತರೊಳಮತಿಋುಜು ದೂ ।
ಷಕರೊಳಮರೂಕ್ಷವಚನಂ
ಸಕಲಮಹೀವಳಯತಿಳಕನೀ ಬುಧತಿಳಕಂ ॥ ೭೪೫

## ಸೂತ್ರಂ ೧೭೪

ತದ್ಗುಣಂ, ಪರಸ್ಪರಾಸಂಗತಿಕಂ

† ಅತಿಬಹಲಸ್ಥಿತಿಯಿಂ ಸಂ
ಗತಗುಣಮವಿಭೇದಿಯಾಗೆ ತದ್ಗುಣಮೆನಿಕುಂ ।
ಕೃತಕಾರ್ಯಕಾರಣಂ ವಿ
ಪ್ರತಿಷಿದ್ಧಮದೆನೆ ಪರಸ್ಪರಾಸಂಗತಿಕಂ ॥ ೭೪೬

ಲಕ್ಷ್ಯಂ ॥

ತದ್ಗುಣಕ್ಕೆ ॥

ಯಮುನಾಪಗೆ ಸುರನದಿಯಂ
ಕಮಳೋದರನಿಂದುಮೌಲಿಯಂ ನೀಲನಗಂ ।
ಹಿಮಗಿರಿಯಂ ಪೋಲ್ತರ್ಪಿನ
ಮಮಲಯಶೋರುಚಿ ಪೊದಳ್ದುದಿಳೆಗಿಂದರನಾ ॥ ೭೪೭

ಇದು ಕಿಱಿದಿದು ಪಿರಿದಿದು ಕುಟಿ
ಯಿದು ತೆಮರಿದು ಬಕ್ಕಬಯಲಿದಾಶ್ರಯಮಿದು ಗೆಂ ।
ಟಿದು ಸಾರೆಯೆಂಬ ನಿರ್ಣಯ
ಮದಾದುದಿಲ್ಲೊದವಿ ಪುದಿದ ಮರ್ಬಿನೊಳಾರ್ಗಂ ॥ ೭೪೮

ಪರಸ್ಪರಾಸಂಗತಿಕಕ್ಕೆ ॥

ಹಿಮಕುಮುದಕುಂದಶಶಿಧವ
ಳಮೆನಿಪ ನಿಜಕೀರ್ತಿಯೆಸಕದಿಂದಮಿಳಾಲೋ।
ಕಮನೆಯ್ದೆ ರಕ್ತಮಪ್ಪಂ
ತು ಮಾಡಿದಂ ಕೃಷ್ಣನಿಂತಿದೇನಚ್ಚರಿಯೋ ॥ ೭೪೯

---

* ರುದ್ರಟ—IX, 55. † ರುದ್ರಟ—IX, 24 ; *Cf.* X, 48.

## ಸೂತ್ರಂ ೧೭೫

ವಿಶೇಷೋಕ್ತಿ

* ಒದವಿದ ಸಾಮಗ್ರಿಯೊಳೇ
ಕದೇಶವೈಕಲ್ಯಮಾಗೆಯುಂ ಮತ್ತಂ ತ |
ತ್ಸದೃಶಫಲಸಿದ್ಧಿಯಂ ತೋ
ರ್ಪುದದು ವಿಶೇಷೋಕ್ತಿಯೆಂಬಲಂಕೃತಿಯಕ್ಕುಂ ‖ ೭೫೦

ಲಕ್ಷ್ಯಂ ‖

† ರಥವೊಂದೆಗಾಲಿಯದು ಸಾ
ರಥಿಯಪ್ಪೊಡೆ ಪೆಟವನಸಮಮಶ್ವಮವೆಂತುಂ |
ಪ್ರಥಿತಪ್ರತಾಪದಿಂದಂ
ಮಥಿತಪ್ರತಿಪಕ್ಷನುದಯಿಯಾದಂ ದಿನಪಂ ‖ ೭೫೧

ಧನುವುಂ ಕರ್ಬಿನ ಬಿಲ್ ಗಡಂ [1]ಗೋಣಿ[1]ಯುಮುಂ ನೀರೇಜಸೂತ್ರಂ ಗಡಂ
ನನೆಗಳ್ ಬಾಣಚಯಂ ಗಡಂತತನು ತಾಂ ಮತ್ತಂ ಮನಂ [2]ನೊಂದು ನಿ |
ರ್ಬನಿ[2]ಪಂತಾರ್ದಿಸುತಿರ್ಪನುರ್ಚಿದೆರ್ದೆಯೊಳ್ [3]ಪುಣ್ಣಿತ್ತರೆಂದಿಂತಿದಿ
ಲ್ಲಿನಿಸುಂ[3] ಮನ್ಮಥಶಸ್ತ್ರಕಲ್ಪಮಿದು ದಲ್ ಬೇಱೊಂದು ಶಿಕ್ಷಾಕ್ರಮಂ‖ ೭೫೨

ಇವು ಅತಿಶಯಭೇದಂಗಳ್ ‖

## ಸೂತ್ರಂ ೧೭೬

ಅರ್ಥಶ್ಲೇಷಂ
ಶಬ್ದಶ್ಲೇಷಂ

‡ ಎರಡರ್ಥಮೊಂದೆ ಶಬ್ದಾಂ
ತರದೊಳ್ ನೆಗೞ್ವಂತು [4]ಪೇೞ್ವುದ[4]ರ್ಥಶ್ಲೇಷಂ |
ದೊರೆಕೊಳೆ ಶಬ್ದಾವಯವದೊ
ಳೆರಡಭಿಮತಶಬ್ದಮಱಿಗೆ ಶಬ್ದಶ್ಲೇಷಂ ‖ ೭೫೩

## ಸೂತ್ರಂ ೧೭೭

ಶ್ಲೇಷ
ಭೇದಂಗಳ್

§ ತತ್ವಂ ವ್ಯಾಜಸ್ತುತಿಯವಯ[5]ವಸ್ಥಂ[5] ವಿರೋಧಾವಭಾಸಾ
ರ್ಥತ್ವಂ ಮಿಕ್ಕಿರ್ದಧಿಕಮವಿಶೇಷಾತ್ಮಕಂ [6]ವಸ್ತ್ವ[6]ಸಂಭಾ |
ವ್ಯತ್ವಂ ವಕ್ರೋಕ್ತ್ಯನುಗತಮುಮೆಂದಿಂತು ತಾತ್ಪರ್ಯದಿಂದಂ
ತತ್ವಜ್ಞರ್ ವಿಸ್ತರಿಸೆ ನೆಗೞ್ಗುಂ ಶ್ಲೇಷ[7]ಭಾಗ[7]ಪ್ರಭೇದಂ ‖

---

* ದಂಡಿ—II, 323. † ದಂಡಿ—II. 328, 1 ಡೋಣಿ (ಓ), ಗೊನೆ, ಗೊಲೆ (ಅ).
2 ವೊಂದುನಿರ್ಬನಿ (ಅ). 3 ಪುಣ್ಬಿತ್ತದೆಂದಿಂತಿವೆಲ್ಲೆನಸುಂ. ‡ ರುದ್ರಟ—X, 1
4 ಪೇಡ್ದೊಡರ್ಥ (ಅ). § ರುದ್ರಟ—X, 2. 5 ವಿತ್ವಂ (ಅ). 6 ವಸ್ತು (ಅ).
7 ಭೇದ (ಓ).

## ಸೂತ್ರಂ ೧೭೮

ಅಲ್ಲಿ ||

* [1]ಬಗೆಗೆ ಪೆಱತರ್ಥವೊಂದಂ[1]
ನೆಗೞ್ಚುತುಂ ನೆಗೞ್ವ ತತ್ವವರ್ಣನೆ ತತ್ವಂ |
ತಗುಳೆ ಪಟಿ[2]ವಂತೆ[2] ಕೆಯ್ಮಿಗೆ
ಪೊಗೞ್ವುದು ತಾಂ ವ್ಯಾಜಸಂಸ್ತವಾಖ್ಯಮೆನಿಕ್ಕುಂ || ೭೫೫

(ತತ್ವಂ / ವ್ಯಾಜಸ್ತುತಿ)

ಲಕ್ಷ್ಯಂ ||

ತತ್ವಕ್ಕೆ ||

ವರಗೋಮೇದಕವಿಸ್ಫುರ[3]ದ್ವಸನ[3]ನನುದ್ಯತ್ಪದ್ಮರಾಗೋಲ್ಲಸ
ಚ್ಚರಣಂ ನೀಲ[4]ರುಚಿ[1]ಪ್ರವಾಲಸಿತನೀಷಲ್ಲೋಹಿತಾಕ್ಷಂ ಮನೋ |
ಹರಮುಕ್ತಾಮಯವಜ್ರಸಂಹನನನೇಮಾತೀ ಮಹಾತ್ಮಂ ನೃಪೇ
ಶ್ವರರತ್ನಂ ವಿಲಸತ್ಸುವರ್ಣದೊರೆವೆತ್ತಿರ್ಕುಂ ಭವತ್ಸಂಗದಿಂ || ೭೫೬

ವ್ಯಾಜಸ್ತುತಿಗೆ ||

ವಾತಿ ಪರವೆಣ್ಗೆ ಶರಣಾ
[5]ಯಾತಂಗಸುರಂ ಬಿಯಕ್ಕೆ[5] ಗುಪ್ತಂ ರಿಪುಸಂ |
ಘಾತಕ್ಕೆ ಪರಾಕ್ರಮ[6]ನೆನೆ[6]
ಭೂತಲಮೇನೆಂದು ಕೇಶಿಯಂ ಬಣ್ಣಿಪುದೋ || ೭೫೭

ಜೋಡೆ ಕರಮಡಿ[7]ಯುಳಾ[7]ರೊಡ
ಗೂಡಿಯುಮವರ್ಗಲ್ಲಳೆನಿಪ ವಸುಧಾಂಗನೆಯಂ |
ಕೋಡೊಳೆ ತಳೆದುಂ ಸೊಬಗಿನ
ಗಾಡಿಗೆ [8]ಮುಯ್ಯಾಂತ[8] ಸೊಬಗಿದಾ[9]ವುದು[9] ಗಜೆಗಾ || ೭೫೮

## ಸೂತ್ರಂ ೧೭೯

† ಅವಯವಮುಖದಿಂ ಸಮುದಾ
ಯವಿಶೇಷಣಮನ್ಯವಸ್ತುಗಮಕ[10]ಮದಾದಂ[10] |
ದವಯವಮವಿರುದ್ಧಂ ನೋ
ಡೆ ವಿರುದ್ಧಸ್ಥಿತಿಯೊಳಿರೆ ವಿರುದ್ಧಾಭಾಸಂ || ೭೫೯

(ಅವಯವಂ ವಿರೋಧಾಭಾಸಂ)

---

* ರುದ್ರಟ—X, 20, 11; ದಂಡಿ—II, 343. 1 ಬಗೆಪೆಱತುಮರ್ಥವೊಂದುಂ (ಅ). 2 ವನಿತೆ (ಅ). 3 ದ್ದಶನ (ಅ). 4 ಮಣಿ (ಅ). 5 ಯಾತಕ್ಕಸುರಂ ವ್ಯಯಕ್ಕೆ (ಅ). 6 ಮೆನೆ (ಅ). 7 ಯೊಳಾ (ಅ). 8 ಮುಯ್ಯಾಂತ (ಅ). 9 ವುದೊ (ಅ). † ರುದ್ರಟ—X, 18, 22. 10 ದೊಳಮರ್ದಂ (ಅ).

ಲಕ್ಷ್ಯಂ ||

ಅವಯವಕ್ಕೆ ||

ಬಳಭದ್ರಂ ಭುಜದೊಳುರ
ಸ್ಥಳದೊಳ್ ಪೃಥು ವಿತತಯಶದೊಳರ್ಜುನನೀತಂ |
ಕಳಿಕಾಲದೊಳಂ ತನ್ನೊಳ್
ತಳೆದಿರ್ದಂ ಪೂರ್ವಭೂಮಿಪಾಲಸ್ಥಿತಿಯಂ || ೭೬೦

ವಿರೋಧಾಭಾಸಕ್ಕೆ ||

ಅನುಗತಕರ್ಣಂ ಕೃಷ್ಣಾ
ರ್ಜುನಾನುರಕ್ತಂ ವಿಲೋಚನಂ ದೋರ್ದಂಡಂ |
ಘನದೃಢಬಲಂ ಪ್ರಲಂಬಂ
ತನಗೆನೆ ಪಿರಿದುಂ ವಿರುದ್ಧಮಿಾ ನೃಪನಂದಂ || ೭೬೧

## ಸೂತ್ರಂ ೧೮೦

* ಆರಬ್ಧಕ್ಕಧಿಕಮಸಾ
ಧಾರಣಗುಣಮಧಿಕಮೆಂಬುದಕ್ಕುಂ ಸದೃಶಾ |
ಕಾರವಿಶೇಷಣಮರ್ಥಮು
ದಾರಂ ಬೇಱೊಂದು ತೋರ್ಪೊಡವಿಶೇಷಾಖ್ಯಂ || ೭೬೨

ಅಧಿಕಂ
ಅವಿಶೇಷಂ

ಲಕ್ಷ್ಯಂ ||

ಅಧಿಕಕ್ಕೆ ||

ಅಂಗುಳೊಳಡಸಿದ ವಿಷಮುಂ
ಭಂಗುರತರವಿಷಮದೃಷ್ಟಿಯುಂ ವ್ಯಾಳಸಮಾ |
ಸಂಗಮುಮರ್ದಿರೆ ಮದನಹ
ರಂಗೆಣೆಯೆನಿಪುದಱಿನೆಮಗೆ ಖಳರಭಿವಂದ್ಯರ್ || ೭೬೩

ಅವಿಶೇಷಕ್ಕೆ ||

ಗುರುಪರಿಣಾಹಂಗಳ್ ಪೀ
ವರಂಗಳುನ್ನತಿಯುತಂಗಳುರ್ವರೆಗೆ ಮನೋ |
ಹರಕುಚಮಂಡಳದಂತಿರೆ
ಕರಮೊಸೆವುವು ವಿಮಳದರ್ದುರಾದ್ರಿಗಳೆರಡುಂ || ೭೬೪

---

* ರುದ್ರಟ—X, 3, 7, 8.

## ಸೂತ್ರಂ ೧೮೧

* ಪೆಸರೊಳಸಂಭವಮೆನಿಸುಗು
ಅಸಂಭವಂ ವಕ್ರೋಕ್ತಿ — ಮಸಂಭವಂ ತದ್ವಿಶೇಷಣಂ ಪೃಥಗರ್ಥಂ ।
ಪೊಸಯಿಸೆ ಭಿನ್ನರಸಂ ಸು
ಪ್ರಸಿದ್ಧವಾಚ್ಯದೊಳದಲ್ತೆ ವಕ್ರೋಕ್ತಿ ಕರಂ ॥ ೭೬೫

ಲಕ್ಷ್ಯಂ ॥

ಅಸಂಭವಕ್ಕೆ ॥

ಅವೃಷಚ್ಛೇದನನತಿಧವ
ಳವರ್ಣನುತ್ಸಾರಿತಾರಿ ಬೇಱೊರ್ವಂ ದಾ ।
ನವಮಥನನೀತನೆನಿಸಿದ
ನವನಿಗೆ ಪುರುಷೋತ್ತಮಾನುಭಾವಂ ಕೃಷ್ಣಂ ॥ ೭೬೬

ವಕ್ರೋಕ್ತಿಗೆ ॥

ವೀರರಸ[1]ಪ್ರವಿದಾರಣ[1]
ಮಾರಣಸಂಪ್ರಾಪ್ತಕೌಶಲಂ ಭಾವಿಸೆ ರಂ ।
ಭೋರು ನರೇಂದ್ರತೆಯುಂ ವಿ
ಸ್ತಾರಿಸಿದಪನಂಗನಂಗಸಿದ್ಧಿಯೊಳೀತಂ ॥ ೭೬೭

## ಸೂತ್ರಂ ೧೮೨

ಪದವರ್ಣವಿಭಕ್ತಿವಿಭಾ
ಭಂಗಶ್ಲೇಷಂ — ಗದಿಂ ದ್ವಿಧಾರೂಪಮಿಷ್ಟ[2]ಮಕ್ಲಿಷ್ಟಂ[2] ಶ ।
ಬ್ದದೊಳಾಗಿ [3]ತೋಱುವಂದಂ[3]
ತದು ಭಂಗಶ್ಲೇಷಮೆಂದು ಪೇೞಲ್ಪಡೆಗುಂ ॥ ೭೬೮

ಲಕ್ಷ್ಯಂ ॥

ಸ್ವಗತಾನಲಸನ್ಮಣಿರ
ಶ್ಮಿಗಾಢಮಗಣಿತ[4]ಜಲದ್ವಿ[4]ಪಾವಳಿ ಕಡಲಂ ।
ಮಿಗೆ ವಂದವಮರಗಜೇಂದ್ರಂ
ಸೊಗಯಿಸು[5]ವುದು[5] ದಾನವಾರಿಲೇಖಾನುಗತಂ ॥ ೭೬೯

---

* ರುದ್ರಟ—X, 16, 9. 1 ಪ್ರದಚಾರಣ (ಅ.ಇ). 2 ಮಾಶ್ಲಿಷ್ಟಂ (ಅ). 3 ತೋರ್ಪತೆಱನಂ (ಅ). 4 ಜಗದ್ವಿ (ಓ.ಅ). 5 ಗುಂ (ಅ).

## ಸೂತ್ರಂ ೧೮೩

ಸಂಶ್ಲೇಷಂ

* ಯೋಗಂ ಪಲವುಮಲಂಕೃತಿ
ಗಂಗಿರೆ ಸಂಶ್ಲೇಷವೆಂಬುದನ್ವರ್ಥಗತಂ ।
ಯೋಗಮುಮಂಗಾಂಗಿಪ್ರವಿ
ಭಾಗಂ ಸಮಕಕ್ಷಮೆಂದೆರಡ್ತೆಱನಕ್ಕುಂ ॥ ೭೭೦

ಲಕ್ಷ್ಯಂ ॥

† ಸ್ವಭಾವಗಂಭೀರನಲಂಘ್ಯವೈಭವಂ
ಪ್ರಭೂತರತ್ನಂ ನೃಪನಂಬುರಾಶಿವೋಲ್ ।
ವಿಭೀಷಣಗ್ರಾಹಮವೃಷ್ಯಮರ್ಣವಂ
ಪ್ರಭೂತಸಾರಂ ಸುಖಸೇವ್ಯನೀ ನೃಪಂ ॥ ೭೭೧

## ಸೂತ್ರಂ ೧೮೪

ಪ್ರೇಯಂ ಊರ್ಜಸ್ವಿ ಆಶಿ

‡ ಪ್ರೇಯಂ ಪ್ರಿಯತರವಚನಾ
ಖ್ಯೇಯಮಹಂಕಾರಗರಿಮಮೂರ್ಜಸ್ವಿ ಶುಭ ।
[1]ಪ್ರಾಯಾರ್ಥಾಶಂಸಾಭಿ[1]
ಪ್ರಾಯಮಲಂಕಾರಮಾಶಿಯೆಂಬರ್ ಕೆಲಬರ್ ॥ ೭೭೨

ಲಕ್ಷ್ಯಂ ॥

ಪ್ರೇಯಕ್ಕೆ ॥

ನೆಲನನವಯವದೆ ತಳರದೆ
ನಿಲೆ ತಾಳ್ದಿದ ಮೆಯ್ಗೆ ಮೆಲ್ಲಮಾನಲ್ಕರಿದಾ ।
ಯ್ತುಲಘುಪ್ರಸಾದದಿಂ ನೀ
ನೊಲದೆಟ್ಟರೆ [2]ಮನೆಗೆ[2] ಮನದೊಳಾದನುರಾಗಂ ॥ ೭೭೩

ಊರ್ಜಸ್ವಿಗೆ ॥

[3]ಕೆಳದೀ[3] ಬಿಲ್ಲುಮನಂಬುಮ
ನಳೀಕಭಟವಿಕಟವೇಷಮಂ ಬಿಸುಟೀಗಳ್ ।
ಮುಳಿಯಿಸದೆನ್ನಂ ಮಗುಟ್ದುಂ
ಬಳೆದೊಟ್ಟೊಡೆ ಗೆಲ್ವೆಯಂಬುದೊಟ್ಟೊಡೆ [4]ಗೆಲ್ಲಯ್[4] ॥ ೭೭೪

---

* ಭಾಮಹ—III, 49 ; ದಂಡಿ—II, 359, 360. † ಭಾಮಹ—III, 50. ‡ ದಂಡಿ—II, 275. 1 ಪ್ರಾಯಾರ್ಥಾಂಶು ಸಾಭಿ (ಅ). 2 ಮನಕೆ (ಓ.ಅ). 3 ಕಳಲದೆ. 4 ಗೆಲ್ವಯ್ (ಅ.ಓ).

ಅಕ್ಕರೆ ||
ನೆಲೆಗೊಳ್ಗೆ ನಿಜಭುಜಾಸಿಯೊ
ಳೊಲಿದು ಜಯಾಂಗನೆ ವಿರೋಧಿವಂಶಾವಳಿಯಂ ।
ನೆಲೆಗಿಡಿಸಿ ನಿನ್ನ ತೇಜೋ
ಜ್ವಲನಂ ತಳ್ತುರ್ವಿಕೊಳ್ಗೆ ವಿಕ್ರಮತುಂಗಾ || ೭೭೫

## ಸೂತ್ರಂ ೧೮೫

* ಭಾವಿಕಮೆಂದರೆಬರ್ ಕವಿ
ಭಾವಿಕಂ ಭಾವಗತಾರ್ಥ[1]ಮನೆ[1] ತಾಮಲಂಕೃತಿ[2]ಗಳೊಳು[2] |
ದ್ಭಾವಿಸಿ ಪೇಳ್ವರ್ ಶಕ್ತಿ ಸ
ಮಾವಿರ್ಭೂತಪ್ರಬಂಧವಿಷಯಮದಕ್ಕುಂ || ೭೭೬

## ಸೂತ್ರಂ ೧೮೬

ಸ್ಥಾನೋಪವರ್ಣನಂ ಶ
ಬ್ದಾನಾಕುಳಭಾವಮದ್ಭುತಾರ್ಥತ್ವಂ ಸ್ವಾ |
ಧೀನರಸವೃತ್ತಿ ಸಂಬಂ
ಧಾನುಗಮಂ ಭಾವಿಕಕ್ಕೆ ಭಾವಮಿವಕ್ಕುಂ || ೭೭೭

ಇದು ಗುಣವಿವೇಕದೊಳ್ ಅರ್ಥಾಲಂಕಾರಪ್ರಕರಣಂ ತೃತೀಯಂ ||

ಗೀತಿಕೆ || ಈ ತೆಱದಿಂದರ್ಥಾಲಂಕೃತಿ
[3]ಯೋತು ವಿಭೇದಮನಾದಮೆಲ್ಲಮಂ[3] |
ನೂತನಮಾರ್ಗಮೆಸೆಯೆ [4]ಪೇಳ್ದಂ[4]
ಖ್ಯಾತಯಶಂ ಕವಿತಾಗುಣೋದಯಂ || ೭೭೮

ಶ್ರುತದೇವೀಮಕರಂದಕಲ್ಪಲಪನಂ ವಾಕ್‌ಶ್ರೀನಿವಾಸಾಂಬುಜಾ
[5]ಯಿತ[5]ವಕ್ತ್ರಂ ರಸಭಾವಭಾಸುರಸಮುದ್ಯದ್ಭಾರತೀನರ್ತನೋ |
ಚಿತರಂಗಪ್ರತಿಮಾನನಂ ಪ್ರವಿಲಸದ್ವ್ಯಾಕಸ್ಲಂದರೀಕುಂಕುಮಾಂ
ಕಿತಕೇಳೀಭವನಾಜಿರೋಪಮಮುಖಂ ಭೂಭಾಗದೊಳ್ ನಾಕಿಗಂ || ೭೭೯

ಇದು ಸಕಲಸುಕವಿಜನಮನಸ್ಸರೋಜಿನೀರಾಜಹಂಸಾಯಮಾನಾ
ನೂನಕವಿತಾಗುಣೋದಯಂ ಶ್ರೀನಾಗವರ್ಮವಿರಚಿತಮಪ್ಪ
ಕಾವ್ಯಾವಲೋಕನದೊಳ್ ಗುಣವಿವೇಕಾಧಿಕರಣಂ
ತೃತೀಯಂ



* ದಂಡಿ—II, 363. Cf. 1 ಮೆನೆ (ಅ). 2 ಯೊಳಗು (ಅ). 3 ಯಾಂತಃ ಪಾದೆ ವಿಚ್ಛೇದಮನಾದು ಮೆಲ್ಲಮಂ (ಓ), ಯಂತಃಪಾತವಿಭೇದಮನಾದವನೆಲ್ಲಂ (ಅ). 4 ಪೇಳ್ದಂ (ಅ). 5 ಯತ (ಅ).

# ರೀತಿಕ್ರಮರಸನಿರೂಪಣಾಧಿಕರಣಂ

---

## ರೀತಿಪ್ರಕರಣಂ

### ಸೂತ್ರಂ ೧೮೭

ರೀತಿ ವಿನೂತವಸ್ತುಕೃತಿಗೊಪ್ಪುವ ಮೆಯ್ ರಸಭಾವವೃತ್ತಿನಿ
ರ್ಣೀತಿಯೆ ಜೀವಮಂತದಱಿನನ್ವಿತ[1]ನಪ್ಪ[1] ಕವೀಶ್ವರಂ ಬುಧ ।
ವ್ರಾತಮೊಱಲ್ದು [2]ಬಿಚ್ಚಟಿಸಿ[2] ನಚ್ಚುವಳಂಕೃತಿ ಕೂಡದಿರ್ದೊಡಂ
ರೀತಿಯೊ[3]ಳೊಂದೆ[3] ಪೇೞ್ವುದು ರಸಂ ಬಿಡೆ ಬಂಧುರಕಾವ್ಯಬಂಧಮಂ ॥

### ಸೂತ್ರಂ ೧೮೮

ರೀತಿ

* ಪದರಚನಾತಿಶಯಂ ರೀ
ತಿ ದಲದುವುಂ ನಿಯತವರ್ಣಗುಂಫನಗುಣದೊಂ ।
[4]ದೊದವಿಂ[4] ಮೂದೆಱನಕ್ಕುಂ
ವಿದರ್ಭಪಾಂಚಾಲಗೌಡವಿಷಯನಿಬದ್ಧಂ ॥ ೭೮೧

### ಸೂತ್ರಂ ೧೮೯

ವೈದರ್ಭರೀತಿ

ಅಸಮಸ್ತಪದನ್ಯಾಸಂ
ಪ್ರಸಾದಮಾಧುರ್ಯಗುಣಸಮಗ್ರಮುದಾರಂ ।
ರಸಭಾವಭಾವಿತೋಕ್ತಿ
ಪ್ರಸರಂ ವೈದರ್ಭರೀತಿಯೆನೆ ಪೆಸರ್ವಡೆಗುಂ ॥ ೭೮೨

ಲಕ್ಷ್ಯಂ ॥

ಮನವೊಲ್ದಾತನ ಗಾಡಿಯುಂ ದರವುರಂಗಂಡಾಕೆಗಳ್ ಪೂವಿನಂ
ಬಿನ ಕೋಳ್ಗಂ ಕುಳಿರ್ವಾಲನೀರ್ಗಮಲರ್ವಾಸಿಂಗಂ ಕುಳಿರ್ಕೋೞ್ವಿನಂ ।
ದನಕಂ ಚಂದನಕಂ ಪಸುರ್ಪೆಸೆವ ಬಾಳ್ಕೊಂಪಕ್ಕವೊಂದೊಂದೆ ತ
ಣ್ಪನಿಯೊಳ್ ಕೋಡಿಸುತಿರ್ಪ ಬಿಜ್ಜಣಿಗೆಗಂ ಪಕ್ಕಾಗದೇಂ ಪೋಪರೇ ॥ ೭೮೩

---

1 ಮಪ್ಪ (ಅ). 2 ಬಿಚ್ಚಟಿಪೆ (ಅ). 3 ಳೊಂದಿ (ಅ). * ವಾಮನ—I. 11, 6, 7, 8, 9. 4 ದೊಡನಿದೆ (ಅ).

## ಸೂತ್ರಂ ೧೯೦

ಪಾಂಚಾಲರೀತಿ

ದ್ವಿತ್ರಿಪದರಚಿತವೃತ್ತಿ ವಿ
ಚಿತ್ರೌಪಮ್ಯಾದ್ಯಲಂಕ್ರಿಯಾಸಮುಪೇತಂ ।
ಶ್ರೋತ್ರಸುಖಲಲಿತಮೃದುಪದ
ಪಾತ್ರಂ ಪಾಂಚಾಲರೀತಿ[1]ಯೆನೆ ಪೆಸರ್ವಡೆಗುಂ[1] ॥ ೨೮೪

ಲಕ್ಷ್ಯಂ ॥

ಇನಿಯನ ಕೆಂದಳಂ ತಳವಮನೊಯ್ಯನೆ ಸೋಂಕೆ ಪೊದಳ್ದ ನಾಣ ಪೆಂ
ಪಿನೊಳೊಗೆತರ್ಪ ಘರ್ಮಜಲಬಿಂದುಗಳಿಂ ನಮಿತಾನನಾಬ್ಜೆ ಬ ।
ಚ್ಚನೆ ಬಸಿಯುತ್ತುಮಿಂದುಕರಸಂಕುಳವೊಯ್ಯನವುಂಕಿ ಸೋಂಕೆ ಸೋಂ
ಕಿನೊಳೊಸರ್ವಿಂದುಕಾಂತಮಣಿಪುತ್ರಿಕೆಯಂದದಿ[2]ನಾದವೊಪ್ಪಿದಳ್[2] ॥ ೨೮೫

## ಸೂತ್ರಂ ೧೯೧

ಗೌಡರೀತಿ

ಅತಿದೀರ್ಘಸಮಾಸಾಂಚಿತ
ಗತಿಶಬ್ದಾಡಂಬರಾನುವಿದ್ಧಂ [3]ಕ್ರೋಧಾ ।
ದ್ಭುತ[3]ರೌದ್ರವೀರರಸಸಂ
ಗತಮಂತದು ಗೌಡರೀತಿ [4]ಪರುಷ[4]ಪ್ರಾಯಂ ॥ ೨೮೬

ಲಕ್ಷ್ಯಂ ॥

[5]ವಂಗಾಂಗಾಂಧ್ರ[5]ಕಳಿಂಗಕೊಂಗ[6]ವಿಸರ[6]ತ್ಪಾದಾತಪಾಠೀನಮು
ದ್ರಂಗತ್ತುಂಗತುರಂಗಭಂಗುರತರಂಗಾಕೀರ್ಣಮುಚ್ಚೃಂಖಳೋ ।
ತ್ತುಂಗೋನ್ಮತ್ತಮತಂಗಜಪ್ರಕರಯಾದಸ್ಸಂಕುಳಂ ಕೂಡೆ ನೋ
ಟ್ಟಂಗಂದದ್ಭುತಮಾಗಿ ತೋಱು ಮಸಗಿತ್ತುರ್ವೀಶಸೈನ್ಯಾರ್ಣವಂ ॥ ೨೮೭

## ಸೂತ್ರಂ ೧೯೨

ಕಾರುಣ್ಯಂ ಹಾಸ್ಯಂ ಶೃಂ
ಗಾರಮಿವಿನಿತಱೊಳಮಕ್ಕೆ ವೈದರ್ಭಿ ಮನೋ ।
ಹಾರಿಪ್ರಳಯಾದ್ಭುತರಸ
[7]ವೀರರಸಂ[7]ಗಳ್ಗೆ ಪೇೞ್ಗೆ ಪಾಂಚಾಳಿಕೆಯಂ ॥ ೨೮೮

---

1 ಯೆಂಬುದದಕ್ಕುಂ (ಅ). 2 ನೊಪ್ಪುತೋಱುದಳ್ (ಅ). 3 ಕ್ರೋಧೋದ್ಧತ (ಅ).
4 ಪುರುಷ (ಅ) 5 ವಂಗೀವಂಗ (ಅ). 6 ವಿಳಸ (ಅ). 7 ವೀರಾಖ್ಯಂ.

## ಸೂತ್ರಂ ೧೯೩

ಎಸೆಗುಂ ರೌದ್ರಭಯಾನಕ
ರಸಬೀಭತ್ಸೋಕ್ತಿ ಗೌಡರೀತಿಯಿನದಱೊಳ್ ।
ಪೊಸಯಿಸುಗುಂ ಮೇಣ್ ನಿಸದಂ
ರಸವತ್ವಮತಿಪ್ರತೀತಿ[1]ವೃತ್ತ್ಯಾ[1]ಶ್ರಯದಿಂ ॥ ೨೮೯

## ಸೂತ್ರಂ ೧೯೪

ಅರೆಬರ್ ದೀರ್ಘಸಮಾಸಂ
ಬೆರಸಿರೆ ಶೃಂಗಾರರಸಮುಮಂ ಪೇೞ್ವರ್ ಬ ।
ತ್ತರಿಸುವರಸಮಾಸಪದಾಂ
ತರಂಗಳೊಳಗುಚಿತಮಾಗಿ ರೌದ್ರಾದಿಯುಮಂ ॥ ೨೯೦

ಲಕ್ಷ್ಯಂ ॥

ಶೃಂಗಾರರಸಕ್ಕೆ ॥

ಅವತಂಸೋತ್ಪಲತಾಡನಂ ಕನಕಕಾಂಚೀಬಂಧನಂ ನೂಪುರಾ
ರವಝಂಕಾರಿತಚಾರುವಾಮಚರಣಾಘಾತಂ ಚಳದ್ಭ್ರೂಲತಾ ।
ಗ್ರವಿಭಾಗೋತ್ಕಟತರ್ಜನಂ ತರಳತಾತಾಮ್ರಾಧರಂ ಚಕ್ರಿಗಿ
ತ್ತವಲಂಪಂ ಪ್ರಣಯಪ್ರಕೋಪಸುರತಪ್ರಾರಂಭದೊಳ್ ಕಾಂತೆಯಾ ॥೨೯೧

ರೌದ್ರಾದಿಗೆ ॥

ಇರದೆಂಟುಂ ದಿಗ್ಗಜಂಗಳ್ ನೆರದಿರದಿದಿರಂ ತಾಗೆಯುಂ ಮಂದರಕ್ಷ್ಮಾ
ಧರದೊಳ್ ಕೆಯ್ಗುಡಿ ಗೋತ್ರಾದ್ರಿಗಳೆ ಗಜಘಟಾರೂಪದಿಂ ತಾಗೆಯುಂ ಮ।
ತ್ಕರಿ ತಾಂಗಲ್ ತಾನೆ ಸಾಲ್ಗುಂ ಪೆಱಪೆಱವು ಘಟಾಬಂಧಮೇ ಧಂಡಮೆಂಬೊಂ
ದು ರಣೋತ್ಸಾಹಂ ಮನಕ್ಕುಬ್ಬರಿಸಿರೆ ಸಮರಾಟೋಪಮಂ ತಾಳ್ದಿ ನಿಂದಂ ॥

ಇದು ರೀತಿಕ್ರಮರಸನಿರೂಪಣದೊಳ್ ರೀತಿಪ್ರಕರಣಂ ಪ್ರಥಮಂ ॥

---

1 ನೃತ್ಯಾ.

# ರಸಪ್ರಕರಣಂ

---

## ಸೂತ್ರಂ ೧೯೫

ಶೃಂಗಾರಾದಿಗಳಪ್ಪ ರ
ಸಂಗಳ್ ವರ್ತಿಸುಗು[1]ಮಂತವೆಂಟೆ[1] ವಲಂ ಕಾ ।
ವ್ಯಾಂಗಕ್ಕೆ ಸತ್ಕ್ರಿಯಾರೂ
ಪಂಗಳ್ ರತ್ಯಾದಿಭಾವಸಂಪನ್ನಂಗಳ್ ॥ ೭೯೩

## ಸೂತ್ರಂ ೧೯೬

(ಸ್ಥಾಯಿಭಾವಂ)

* ರತಿ ಪರಿಹಾಸಂ ಶೋಕೋ
ದ್ಗತಮುತ್ಸಾಹಂ ಭಯಂ ಪ್ರಕೋಪಂ ವಿಜುಗು ।
ಪ್ಸತೆ ವಿಸ್ಮಯಾಶಯತ್ವಂ
ಪ್ರತಿನಿಯತಸ್ಥಾಯಿಭಾವಮಿವು ತಾಮಕ್ಕುಂ ॥ ೭೯೪

## ಸೂತ್ರಂ ೧೯೭

(ಸಂಚಾರಿ ಭಾವಂ)

† ಮತಿನಿರ್ವೇದಾವಹಿತ್ಥಶ್ರಮಮದಜಡತಾಗ್ಲಾನಿಚಿಂತೋಗ್ರತೇರ್ಷ್ಯಾ
ಧೃತಿನಿದ್ರಾ[2]ವೇಗ[2]ಶಂಕಾತ್ರಸನಚಪಲತಾಲಸ್ಯ[3]ಸುಪ್ತಾವಬೋಧ[3] ।
ಸ್ಮೃತಿಗರ್ವಾಮರ್ಷದೈನ್ಯೋತ್ಸುಕರತಿಮುದಪಸ್ಮಾರಲಜ್ಜಾವಿಷಾದ
ಸ್ಥಿತಿಚಿತ್ತಭ್ರಂಶಮೋಹಾಮಯಮೃತಿಗಳಿವಿಂತೆಯ್ದೆ ಸಂಚಾರಿಭಾವಂ॥

## ಸೂತ್ರಂ ೧೯೮

(ಸಾತ್ವಿಕಭಾವಂ)

‡ ಸ್ವೇದಂ ವೈವರ್ಣ್ಯಂ ಸ್ವರ
ಭೇದಂ ರೋಮಾಂಚನಂ ಪ್ರಕಂಪನಮಶ್ರು ।
ಧ್ಛೇದಂ ಸ್ತಂಭಂ ಲಯಮೆಂ
ದಾದುವಿವೆಂಟುಂ ರಸಕ್ಕೆ ಸಾತ್ವಿಕಭಾವಂ ॥ ೭೯೬

---

1 ಮತ್ತಮೆಂಟುವಲಂ (ಅ). * ಭರತ—VI, 17; ಸಾಳ್ವ–I. ಸೂ 7. † ಭರತ–VI. 18–21. 2 ವೇಶ (ಅ). 3 ಸುಪ್ತೋಹಬೋಧ ಸುಪ್ತೋವಬೋಧ (ಅ). ‡ ಭರತ–VI. 22.

## ಸೂತ್ರಂ ೧೯೯

ಭಾವಂ ಬಹಿರರ್ಥಸಮು
ದ್ಭಾವಿತಮನುಭವಭವಂ ವಿಭಾವಂ ರಸಸ ।
ದ್ಭಾವವಿಹಿತಾಭಿನಯಮನು
ಭಾವಂ ಸಂಚಾರಿಭಾವಮನವ[1]ಸ್ಥಿತಿ[1]ಕಂ ॥ ೭೯೭

## ಸೂತ್ರಂ ೨೦೦

* ಭಾವಂ ವಿಭಾವಮೆಸೆವನು
ಭಾವಂ ಸಂಚಾರಿಭಾವಮೆಂದಿಂತಿವಱಿಂ ।
ದಾವಿಷ್ಕೃತಮಕ್ಕುಂ ರಸ
ಮಾವುದುಮೆಂದಱಿಗೆ ಭರತಶಾಸ್ತ್ರಕ್ರಮದಿಂ ॥ ೭೯೮

## ಸೂತ್ರಂ ೨೦೧

ಶೃಂಗಾರಂ

† ಸ್ತ್ರೀಪುಂಸರತಿಸಮುತ್ಥ
ವ್ಯಾಪಾರಂ ತಾನದಲ್ತೆ ಶೃಂಗಾರಂ ಮೇ ।
ಳಾಪದಿನಗಲ್ಕೆಯಿಂ ನಿ
ರೂಪಿತಸಂಭೋಗವಿಪ್ರಲಂಭಸಮಾಖ್ಯಂ ॥ ೭೯೯

ಲಕ್ಷ್ಯಂ ॥

ಸಂಭೋಗಶೃಂಗಾರಕ್ಕೆ ॥

‡ ಪದೆಯಿಸೆ ಸೋಂಕಿ [2]ಸಂಕೆಗಿಡೆ[2] ಮೇಳಿಸಿ [3]ಮೆಯ್ಯಿಡೆ ತಳ್ತು[3] ತೋಳ ತ
ಳ್ಪಿದಿರ್ಗೊಳೆ ಮೆಲ್ಲನಪ್ಪಿ ಮೊಗ[4]ಮಿತ್ತಿರೆ[4] ಚುಂಬಿಸಿ ಸೋಲ್ತು ನಾಣನೊ ।
ಕ್ಕುದನಱಿದಿಚ್ಛೆಕಾರ್ತನದ ಲಲ್ಲೆಗಳಂ ನುಡಿದಂತಲಂಪಿನು
ಬ್ಬಿದಿಗಮನಾಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್॥ ೮೦೦

ಇದು ಮುಗ್ಧಸಮಾಗಮಂ ॥

§ ಬಗೆಯೊಳ್ ಪೊಣ್ಮುವಲಂಪು [5]ಕಾತರತೆ[5]ಯಿಂ ತಂದೀಯೆ ಮೆಯ್ಮೆಯ್ಗೆ ಸಂ
ದುಗಳೇನಪ್ಪೊಡಮಿಲ್ಲದಂತಮರ್ದಿನಂ ತಳ್ತಪ್ಪಿ ಬಾಯ್ಗೂಡಿದೊಳ್ ।
ಮಿಗೆ ಪೀರ್ದಂತೆ [6]ಮನೋಜರಾಗರಸಮಂ[6] ಮೆಯ್ವೆರ್ಚೆ ಕಾದಲ್ಮೆ ಕೆ
ಯ್ಮಿಗುವನ್ನಂ ನೆರೆದರ್ [7]ಮನಂ ತಣಿವಿನಂ[7] ನಾನಾರತ [8]ಪ್ರೌಢಿಯಿಂ[8]॥

ಇದು ಮಧ್ಯಸಮಾಗಮಂ ॥

---

1 ಸ್ಥಿತೆ (ಅ). * ಸಾಳ್ವ. I. ಸೂ 1. † ಸಾಳ್ವ. I. ಸೂ 14. ‡ ಸಾಳ್ವ. III, 138. 2 ಸಂಕಿಸದೆ (ಆ). 3 ಮೆಯ್ಯಿಡಿತಕ್ಕು (ಬ). 4 ಮಿತ್ತರೆ, ಮಿತ್ತ್ರದೆ (ಆ), ಮಿತ್ತಿದೆ (ಬ). § ಸಾಳ್ವ III. 140. 5 ಕಾತ೯ಕೆ (ಆ). 6 ಮನೋಜ ರಾಜಸುಖಮಂ, ಮನೋನುರಾಗಸುಖಮಂ (ಅ). 7 ಮನಃಪ್ರಿಯತಮರ್ (ಆ). 8 ಕ್ರೀಡೆಯಿಂ (ಆ).

ಕುಟಿಲಾನೀಲಾಳಕಂಗಳ್ ನಿಮಿರ್ದಿರೆ ಬೆಳರ್ವಾಯ್ ನಾಡೆಯುಂ ಬೀಗೆ[1] ರೋಷೋ[1]
ತ್ಕಟದೇಹಂ ರಾಗದಿಂ ಪಿಳ್ಳನೆ ಪಿಟಿದಪ್ಪೊಲಿಂಬಾಗೆ [2]ನೀಳ್ದಾಳ[2]ವಾಳಂ ।
ವಿಟವೃತ್ತಂ ಮೆಯ್ಯೊಳೆತ್ತಂ ಪಸರಿಸಿರೆ ವಿಟಂ ಬೀಸೆ ನಿಂದಿರ್ದಳೊರ್ವಳ್
ಸ್ಫುಟಿತೋರೋಮಧ್ಯೆ ಛಿನ್ನಾವಟುತಟವಿಹಟದ್ಗ್ರಂಥಿನಿರ್ಗ್ರಂಥದಿಂದಂ ॥ ೮೦೨

ಇದು ಪ್ರೌಢಸಮಾಗವಂ ॥

ಕಡೆಗಣ್ಣಿಂ ಕಡೆಗೋಡಿಪ್ಪೋಗೆ ಪಿರಿದುಂ ಚಲ್ಲಂ ಕುಚದ್ವಂದ್ವದಿ
ಟ್ಟೆಡೆಯಿಂ ಸ್ವೇದಜಲಂ ತುಳುಂಕೆ ಜಘನಾಂತರ್ದೇಶದಿಂದಾವಗಂ ।
ಬಿಡದುಣ್ಮುತ್ತಿರೆ ಮನ್ಮಥದ್ರವಮನಂಗಾವೇಶದಿಂ ಕಾಲ್ತಡಂ
ಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ [3]ಶ್ರೀವಿಪ್ರ[3]ಮಾರ್ತಂಡನಂ ॥ ೮೦೩

ಇದು ಅಭಿಲಾಷೆ ॥

ಪಿಂಗೆ ಪೂಸಿದ ಭಸ್ಮಪರಾಗಂ ಪೊಣ್ಮುವ ಘರ್ಮಜಲಂಗಳಾ
ಪಾಂಗು ಗಂಗೆಯ ಶೀಕರಮೆಂಬಂತಾಗಿರೆ ಕಂಡುಮೆ ಶಂಭುವಂ ।
ಗಂಗೆ ದಲ್ ಬಗಿದಪ್ಪಿದ[4]ಳೆಂದಾ[4]ಶಂಕೆಗೆ ಭೋಂಕನೆ ವೋದೆ ಮು
ದ್ದಿಂಗೊಟಲ್ದಮರ್ದಪ್ಪಿದನೀಶಂ ನಲ್ಲಳನಲ್ಲಿ ರತಾಂತದೊಳ್ ॥ ೮೦೪

ಇದು ಈರ್ಷ್ಯೆ ॥

ವಿಪ್ರಲಂಭಶೃಂಗಾರಕ್ಕೆ ॥

ಪದವೆತ್ತಿರ್ದರ ಜೀವವೊಂದೊಡಲೆ [5]ಬೇಱೆಂಬಂತುಟಂ[5] ಮಾಡಿದಂ
ಮದನಂಗಾವುದು ದೋಷ[6]ಮುಂತೆ[6] ನುಡಿಯಲ್ಕೇಂ ಬರ್ಕುಮೋ ಪಾಪಮುಂ ।
ಬಿದಿಯೆಂಬಾಱಿಡಿ[7]ಗಳ್ಳೆ[7]ನಿಂದಮುಟಿವಾಯ್ತುರ್ವರ್ಗಮಿನ್ನೊರ್ಮೆ ದ್ಯೆ
ವದಿನೆತ್ತಾನುಮದಿಂದುಬಿಂಬಮುಖಿಯಂ ಕಾಣ್ಬೊಂದು ಸಯ್ಪುಕ್ಕುಮೋ ॥ ೮೦೫

ಇದು ಪೂರ್ವಾನುರಾಗಂ ॥

ಅಱಿಯದೆ ಗೆಯ್ದೆನಬ್ಜಮುಖಿ ನೀನಿದನೊರ್ಮೆಗೆ ಸೈರಿಸೆಂದು ಕಾ
ಲ್ಗೆಱಗಿರೆಯುಂ ಪ್ರಿಯಂ ಸುಡುಸುಡೇಂ ಗಡ ಸೈರಿಪುದೆಂದು ಕೋಪದಿಂ ।
ಪಱಿಪಡೆ ಪೋಗೆ ನೂಂಕಿ ಕಳೆದಂದಿನ ದುಷ್ಕೃತಮೆನ್ನನಾವಗಂ
ಮಱುಗಿಸಿ ಮುಚ್ಚಿ ಸುಟ್ಟಪುವು ನೋಡಿರೆ ಶೀತಮರೀಚಿಮಾಲೆಗಳ್ ॥ ೮೦೬

ಇದು ಮಾನಾಖ್ಯಂ ॥

* ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ
ವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಿಂತೆ ನೀನುಮೆ ।
ನ್ನನೆ ನಡೆ ನೋಡುತುಂ ನಭದೊಳಿರ್ದಪಯಪ್ಪುದಱಿಂದೆ ನಿನ್ನನಾ
[8]ನನುವಿಪೆ[8]ನೆನ್ನ ಮೆಯ್ ಬಡವೊ ನಲ್ಲನ ಮೆಯ್ ಬಡವೋ ನಿಶಾಕರಾ ॥ ೮೦೭

ಇದು ಪ್ರವಾಸಂ ॥

---

1 ರಾಗೋ (ಅ). 2 ನೀರಾಳ (ಅ). 3 ಶ್ರೀಚ್ರ (ಅ). 4 ಳೆಂಬಾ (ಅ). 5 ಬೇಱಿಪ್ಪಂತುಟಂ (ಓ). 6 ಮುಂಟೆ (ಓ,ಅ). 7 ಗಕ್ಕ (ಅ). * ಸಾಳ್ವ I. 66. 8 ನನುಮಿಸೆ (ಅ).

[1]ವ್ರತಕೆಂತಾ[1]ಯ್ತಾ ಗಳಿಂತೀತನು ತನುಲತೆಯೊಮಾಗಿಯೆಂದೀಹಿಮಾನೀ
ಪತನಕ್ಕಿಂ[2]ತಾರ್ತೆ[2] ಮೆಯ್ಯಂ ವನಜವದನೆ ಕೇಳ್ ಗ್ರೀಷ್ಮದೊಳ್ ನಿಚ್ಚಮೆತ್ತಂ।
ನತಿ [3]ತಟ್ಟುತ್ತಿರ್ಪ್ಪ[3] ಕಾಯ್ಪಿಂದುರಿವ ಬಿಸಿಲೊಳಾವೇಘವಿಸ್ಫೂರ್ಜಿತಾರ್ಣಃ
[4]ಪತಧಾರಾಭೀಕರಾಡಂಬರಜಳಸಮಯಂ[4] ಬಂದೊಡೆಂತಳ್ಕದಿರ್ಪಯ್॥ ೮೦೮

ಇದು ಕರುಣಾತ್ಮಕ ವಿಪ್ರಲಂಭಂ ॥

## ಸೂತ್ರಂ ೨೦೨

ವಿಕೃತಾಂಗವೇಷಭಾಷಾ
ಹಾಸ್ಯಂ ಪ್ರಕಾರಕೃತಹಾಸಹೇತುಕಂ ಹಾಸ್ಯಮತಿ ।
ಕರುಣಂ ಪ್ರಕಟತರಶೋಕಭಾವ
ಪ್ರಕೃತಿಪರಂ ಕರುಣಮಾರ್ತಜನತಾವಿಷಯಂ ॥ ೮೦೯

ಲಕ್ಷ್ಯಂ ॥

ಹಾಸ್ಯಕ್ಕೆ॥

* ಶ್ರೀ [5]ತನ್ನೆಂದಿನ ರೂಪೆ[5] ಕೌಸ್ತುಭದೊಳಚ್ಚೊತ್ತಿರ್ದವೋಲ್ ತೋಱೆ[6]ಕಂ
ಡೇ[6]ತರ್ಕೀಕೆ ಮದೀಯವಾಸಗೃಹಮಂ ತಾಂ[7]ಪೊಕ್ಕಳೆಂ[7]ದೇವದಿಂ ।
ದಾ[8]ತಾಮ್ರಾಕ್ಷಿಯನೀಕ್ಷಿಸುತ್ತುಮಿರೆ[8] ತನ್ಮುಗ್ಧತ್ವಮಂ ಕಂಡು ಸಂ
ಜಾತಾಂತಃಸ್ಮಿತನಾದ ಕೃಷ್ಣನೆಮಗೀಗಾನಂದಸಂದೋಹಮಂ ॥ ೮೧೦

ಇದು ಉತ್ತಮಪಾತ್ರಂ ॥

ಸೊಗಯಿಪ್ಪೊಳ್ದೊಡೆ ನೋಯೆ[9]ಸೂತ್ರ[9]ದೆಱವೋಲ್ ನೀಳ್ದಿರ್ದ ಬಾರಂತೆ[10] ತೋ[10]
ರ್ಪುಗಿಯಂ ಪುಣ್ಮಯಮಾಗಿ ಮಾಡಿ ಬಿದಿ ಮುಂ ಜಂಘಾಪ್ರಮಾಣಕ್ಕೆ ನೂ ।
ರ್ದ್ದಿಗೆದಂತಿರ್ಪ ನಖವ್ರಣಾವಳಿಗಳಂ ನಲ್ಲಂಗೆ ಕಣ್ಗಿತ್ತುತುಂ
ನಗುತುಂ [11]ಸಾರ್ದು ಸವಂಗಮಂ ಕಳೆ[11]ಯಿಸುತ್ತಿರ್ಪಾಕೆ ಕಣ್ಗೊಪ್ಪಿದಳ್ ॥

ಇದು ಮಧ್ಯಮಪಾತ್ರಂ ॥

ಪ್ಲವಂಗಮಕುಳಂಗಳಲ್ಲಿ ಕಿಸುಗಲ್ಲ ಶೃಂಗಂಗಳಂ
ದವಾಗ್ನಿಶಿಖೆಗೆತ್ತು ಬೆರ್ಚಿ ಮದದಂತಿಯಂ ನಿರ್ಝರ ।
ಪ್ರವಾಹನಗಮೆಂದೆ[12]ಗೆತ್ತದಱ[12] ಬೆಂಗೆ ವಂದಾಗಳಾ
ದವಸ್ಥೆ[13]ತಱ[13]ಸಲ್ವಿನಂ ನಗಿಕುಮಪ್ಸರೋ[14]ಬೃಂದಮಂ[14] ॥ ೮೧೨

† ಕುಳ್ಳಿರ್ದು [15]ಕುಳಿರ್ವ ಮೆಳೆಯೊಳ್[15]
ಪಳ್ಳದ ಕೇದಗೆಗೆ ಪಾಯ್ದು ಪತ್ತಿದ ಕೆಯ್ಯಂ

---

1 ವ್ರತಕೇನಾ (ಅ). 2 ತಾರ್ಥ, ತಾರ್ದ (ಅ). 3 ತಟ್ಟಾಂತಿರ್ಪೆ (ಓ). 4 ಪತದ್ಧಾರಾಭೀರೂಜಳದಸಮಯಂ (ಅ). * ಸಾಳ್ವ II. 94. 5 ತನ್ನಂದರೂಪು (ಅ). 6 ಪೇಡೇ (ಓ). 7 ಪೊಕ್ಕಿರ್ದ (ಅ). 8 ತಾವಮ್ರಾಕ್ಷಿ ನಿರೀಕ್ಷಿಸುತ್ತುಮಿರೆ (ಅ). 9 ನೇತ್ರ (ಅ.ಇ). 10 ತೀ (ಓ,ಅ). 11 ತೋಱಿಸಮಾಗಮಕ್ಕೆಳ (ಅ). 12 ಮತ್ತ ದಱ (ಓ,ಅ). 13 ತಱ (ಓ,ಅ) 14 ವೃಂದಮಂ (ಓ,ಅ). † ಸಾಳ್ವ II 99. 15 ಕುದುರೆಯೋಳ್ ಕುಳು (ಓ,ಅ).

ಮುೞ್ಗಿಚ್ಚೆಱ್ ತೆಱೆದು ಪಲ್ಲಂ
[1]ಪೊಳ್ಳೆನೆ[1] [2]ನಗಿಸಿದುದು[2] ಕಟಕಮಂ ಮರ್ಕಟಕಂ ‖ ೮೧೩

ಇದು ಜಘನ್ಯಪಾತ್ರಂ ‖

[3]ಕರುಣಕ್ಕೆ ‖

ಬಗೆಗೀಗಳ್ ನಿಶ್ಚಯಂ ಪುಟ್ಟಿದುದಱಿದೆನಿದಂ ಪನ್ನಗಂ ಶಂಖಚೂಳಂ
ಮಗನಿಂತೀವೃದ್ಧೆಗೀತಂ ತಡೆದಿರದೊಡಗೊಂಡುಯ್ದವಂ ಕಿಂಕರಂ ಪ |
ನ್ನಗರಾಜಂಗೀತನಂ ವಾಸುಗಿ ಗರುಡನ ತೀಂಗೊಡ್ಡಿದಂ ತಪ್ಪದಾಹಾ
ವಿಗಳದ್ಬಾಷ್ಪಾಂಬುದೀನಾನನೆ ಜನನಿ ಮಗಂ ಪೋಗೆ ಪುಯ್ಯಲ್ಚಿದಪ್ಪಳ್ ‖ ೮೧೪

[4]ಅಂತಲ್ಲದೆಯುಂ ‖

ಅೞಲನೆರ್ದೆಯೊಳ್ ತಿಣ್ಣಂ ತಳ್ಕೈಸಿ ಪುತ್ರವಿಮೋಹದಿಂ
ದೆಱವಿ ತನುವಂ ಹಾಹಾ ಹಾ ವತ್ಸಯೆಂದಮರ್ದಪ್ಪಿಕೊಂ |
ಡೞುತುಮೞುತುಂ ನಟ್ಟಿರ್ದಂಬಂ ಮುನೀಶನಿಳೇಶನಿಂ
ಕಿೞಿಸೆ ಸರಲಂ ಮುನ್ನಂ ತದ್ದ್ವಾರದಿಂದಸು ಪೋಪುದುಂ ‖ ೮೧೫

## ಸೂತ್ರಂ ೨೦೩

ವೀರರಸಂ ಬವರಿಸುಗುಮು
ವೀರಂ ದಾರೋತ್ಸಾಹ[5]ಪ್ರವೃತ್ತಿ[5]ಕಾರಣಕಾರ್ಯಂ |
ರೌದ್ರಂ ದಾರುಣರೋಷಾವೇಶವಿ
ಕಾರಭವಂ ರೌದ್ರಮೆಂಬ ರಸಮದು ನೆಗೞ್ಗುಂ ‖ ೮೧೬

ಲಕ್ಷ್ಯಂ ‖

ವೀರಕ್ಕೆ ‖

ತ್ರಿದಶೇಂದ್ರಾರ್ಜಿತಶೌರ್ಯಮೊರ್ಮೆ ಕಿಡೆ ಪೋಯ್ತಾಭೀಳದಿಕ್ಪಾಲರೊ
ಡ್ಡಿದ ಸೈನ್ಯೋದ್ಧತಿ ಮತ್ತಮೊರ್ಮೆ ಕಿಡೆ ಕೇಳ್ ನಿರ್ಮೂಲಮಾಯ್ತಿನ್ನುಮೊ |
ರ್ಮೆ ದಲೆನ್ನೊಳ್ ಸಮನಪ್ಪವಂ ಪೊಣರೆ ಕೀೞ್ವಂದೊಪ್ಪುಗುಂ [6]ಬೆಂಗಿಯೋ[6]
ಮುದುವರ್ದೇ ನಿನಗೆಂತು ಕೀೞ್ವೆ [7]ನತುಳ[7]ಶ್ರೀಚಂದ್ರಹಾಸಾಸಿಯಂ ‖ ೮೧೭

ಅಂತುಮಲ್ಲದೆಯುಂ ‖

* ಕ್ಷಿತಿಯೊಳರಾತಿಭೂಪತಿಗಳಂ ತವೆ ಕೊಂದು ಸಮಂತು ವಿಪ್ರಸಂ
ತತಿಗಖಿಳಾವನೀತಳಮನಿತ್ತು ನೆಗೞ್ಚಿದನಲ್ತೆ ವಿಕ್ರಮೋ |
ನ್ನತಿಯೊಡನೊಂದು ದಾನಗುಣದುನ್ನತಿಯಂ ಭುವನಕ್ಕೆ ಭಸ್ಮಸಾ
ತ್ಕೃತರಿಪು ಪಾತ್ರಸಾತ್ಕೃತಜಗದ್ವಲಯಂ ಜಮದಗ್ನಿನಂದನಂ ‖ ೮೧೮

---

1 ಕೊಳ್ಳೆನೆ (ಓ, ಅ). 2 ನಗಿಸಿತ್ತು (ಅ). 3 ಕರುಣರಸಕ್ಕೆ (ಓ). 4 ಅದಲ್ಲದೆಯುಂ (ಓ). 5 ಪ್ರವರ್ತಿ (ಅ). 6 ಬೆಂಗಿಯೆಂ, ಲೆಂಗಿಯೆಂ (ಅ). 7 ನಮಳ (ಅ).

* ಸಾಳ್ವ. II 106.

ರೌದ್ರಕ್ಕೆ ॥

* ಕುಡಿವೆಂ ದುಶ್ಶಾಸನೋರಃಸ್ಥಳಮನಗಲೆ ಪೋೞ್ದುದುರ್ಗ [1]ಕನ್ನೆತ್ತರಂ[1]ಪೊ
ಕ್ಕುಡಿವೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ ನುಚ್ಚುನೂಱಾ ।
ಗೊಡೆವೆಂ ತದ್ರತ್ನರಶ್ಮಿಪ್ರಕಟಮಕುಟಮಂ ನಂಬು ನಂಬೆನ್ನ ಕಣ್ಣಿಂ
ಕಿಡಿಯುಂ ಕೆಂಡಂಗಳುಂ ಸೂಸಿದಪುವಹಿತರಂ ನೋಡಿ ಪಂಕೇಜವಕ್ತ್ರೇ॥ ೮೧೯

ಅಱಿಪಿದುದು ರೌದ್ರರಸಮಂ
ಕಿಱುಪಿದ ಕುಡು[2]ಪುರ್ವು[2] ಕರ್ಚಿದೌಡುರ್ಚಿದ ಬಾ ।
ಳಿಱಿಯಲನುಗೆಯ್ದ ಕೆಯ್ ಬೆ
ಳ್ಕಱೆ ಬಿಚ್ಚನೆ ಬಿಟ್ಟ ಕಣ್ ಹಯಾರೋಹಕರಾ ॥ ೮೨೦

## ಸೂತ್ರಂ ೨೦೪

ಭಯಾನಕಂ
ಬೀಭತ್ಸಂ
ಅದ್ಭುತಂ

ಭಯಹೇತುಸಮುದ್ಭೂತಂ
ಭಯಾನಕಂ ಕೃತಜುಗುಪ್ಸನಂ ಬೀಭತ್ಸಂ ।
ನಿಯತಂ ವಿಸ್ಮಯಭಾವಾ
ಶ್ರಯಮದ್ಭುತರಸಮೆನಿಪ್ಪ[3]ಪೆಸರಂ ಪಡೆಗುಂ[3] ॥ ೮೨೧

ಲಕ್ಷ್ಯಂ ॥
ಭಯಾನಕಕ್ಕೆ ॥

† ಮಕರಂ ಬಾಯ್ದೆಱೆದಂದದಿಂ [4]ತೆಱೆದ[4]ಬಾಯ್ [5]ಪೇೞುರ್ದ[5] ಕೂರ್ದಾಡೆ ನೆ
ಕ್ಕ ಕದಂಪೆತ್ತಿರ್ದ ಪುರ್ವು ಪತ್ತಿರ್ದ ಬಸಿಱ್ ಪೋತಱದ ಕಣ್ ಮೇಘಘೋ ।
ಷಕ[6]ಶೋರ[6]ಧ್ವನಿ ನೀಳ್ದ ಕೇಸುರಿವೊಲಿರ್ಪಾಭೀಳಕೇಶಾಳಿ ಸ
ರ್ಪಕ[7]ನದ್ಭೂಷಣಭೀಷಣಂ[7] ಭಯದಮಾಯ್ತಾ ರಾಕ್ಷಸೀರೂಪಕಂ॥ ೮೨೨

‡ ಸೋರ್ಮುಡಿ[8]ಸೋರ್ದು[8] ಪಿಂದಲೆಯೊ [9]ಪಚ್ಚಳ[9]ಮಂ ನಿಜಮಾರ್ಗಮಂ ಬಿಸು
ಟ್ಟೋರ್ವೆಯೆ ಕಟ್ಟ ಚಮ್ಮಟಿಗೆ ಮುಟ್ಟಿದವೊರ್ ನಸುಬೆರ್ಚಿ ತಾನದ ।
ಕ್ಕರ್ಮುಡಿ ಬೆರ್ಚಿ ಪೆರ್ಚಿ ನಡುಕಂ ಪೆಱಗೇೞುದಳೊರ್ವಳೋಪನಂ
ಪೆರ್ವೊಲೆ ಬೆನ್ನನುರ್ಚಿದಪುವೆಂಬಿನಮಪ್ಪಿ[10]ದಳಾಗಳಾರ್ತದಿಂ[10] ॥ ೮೨೩

ಬೆರಲಂ ಕರ್ಚುವ[11]ಪುತ್ತ್ರಂ[11]
ಪರಿದೇಱುವ ಕೆಯ್ದುವಿಕ್ಕಿ ಪೊಡಮಡುವ ಭಯ ।
ಜ್ವರದಿಂ ನಡುಗುವ ಭೀರುಗ
ಳರೆಬರ್ ಕನ್ನಡಿಸಿದರ್ ಭಯಾನಕರಸಮಂ ॥ ೮೨೪

---

* ಸಾಳ್ವ II 107. 1 ಕನ್ನೆತ್ತರಂ (ಅ,ಇ). 2 ಪೊರ್ಬು (ಒ).
3 ಪುದಕ್ಕುಂಪೆಸರಿಂ (ಅ.ಒ). † ಸಾಳ್ವ II 113. 4 ತೆಗೆದ (ಒ,ಅ). 5 ಪೀೞುರ್ದ (ಅ).
6 ಘೋರ (ಅ). 7 ವದ್ಭೂಷಣ ಭೂಷಣಾಂ (ಅ). ‡ ಸಾಳ್ವ II. 114. 8 ಜೋಲ್ದು (ಅ). 9 ಪಚ್ಚಿಮ (ಒ.ಅ). 10 ಳಾದವೊಪ್ಪಿದಳ್ (ಅ.ಇ). 11 ಹುತ್ರಂ (ಒ).

ಬೀಭತ್ಸಕ್ಕೆ ॥

ನೆತ್ತರಂ ಕುಡಿದು ಸೀನೆಣ[1]ದೊರ್ಪಿಡಿ[1]ಖಂಡಮಂ
ಪತ್ತೆ [2]ತೊಯ್ದು[2] ನೆಣದೊಟ್ಟಿದ ಪಾರೆಯುಮಾರೆಯುಂ ।
ತುತ್ತಿ ನುಂಗಿ [3]ಮಿದುಳಂ[3] ತಣಿವಿಂ ಪುಳಿದೇಗುದೇ
ಗುತ್ತುಮಿರ್ಪುವದೞೊಳ್ ರಜನೀಚರಕೋಟಿಗಳ್ ॥ ೮೨೫

ಅದ್ಭುತಕ್ಕೆ ॥

ಪಯವುಲಿಗಳ್ ಮೊಲೆಯೂಡಿದುವಾಹರಿಣಂಗಳಂ . . . . . . .
ನಯದೊಳೆ ನೋಡಿದುವಾನೆಗಳಂ ಹರಿಗಳ್ ನಿಜೋಜ್ವಲಕೇಸರಾ ।
ಳಿಯ[4]ನಗಿಯು[4]ತ್ತಿರೆಯುಂ ಕುಟಿಲಾಹಿಗಳುಂ ನವಿಲ್ಗಳನೆತ್ತಮಾ
ಶ್ರಯಿಸಿದುವಿಂತಿನಿತದ್ಭುತಮಾಯ್ತು ತಪೋ[5]ಮಹತ್ವದಿ[5]ನಾಕೆಯಾ ॥ ೮೨೬

ತನಗಿಲ್ಲದ ಭಯಮಂ ತ್ರೈ
ಲನಾಂತ ರಿಪುನೃಪರ್ಗೆ ಕುಡುವನವರ್ಗಿಲ್ಲದುದಂ ।
ವಿನುತ[6]ಜಯ[6]ಶ್ಲಾಘ್ಯಯಶೋ
ಧನಮಂ ತಾನೀಟ್ಟುಕೊಳ್ವನೇನಚ್ಚರಿಯೋ ॥ ೮೨೭

## ಸೂತ್ರಂ ೨೦೫

* ಸಮಭಾವಪ್ರಭವಂ ಶಾಂ
ತಮಕ್ಕುಮಂತಾ ಸಮತ್ವಮುಂ ವರ್ತಿಸುಗುಂ ।
ಸಮನಿಸಿ [7]ಸಮ್ಯಗ್[7]ಜ್ಞಾನಂ
ತಮಮಂ ರಾಗಮುಮನಲೆದು ತೊಲಗಿಸೆ ಮನದಿಂ ॥೮೨೮

ಲಕ್ಷ್ಯಂ ॥

ಬಗೆಯಂ ತಾರದೆ ತಾಪಸಾಶ್ರಮುಪದಕ್ಕಜ್ಞಾನದಿಂ ಮೂರ್ಖರೇ
ಕೆ ಗಡಂ ಮಾಣ್ಬರೊ ಮುಪ್ಪುಟರ್ ಬಡತನಂ ರೋಗಂ ವಿಯೋಗಂ[8]ಗಳಿ ।
ನ್ನೆಗಮಿಕ್ಕಿ[8]ದೊರ್ಡಲಂ ಬಿಸುಟ್ಟು [9]ಪೆಱದಂ[9] ಕೆಯ್ಕೊಂಡು ಸಂಸಾರದೊಳ್
[10]ಮಗುಳ್ದಂ[10]ಪುಟ್ಟುವರೆಂಬ ಗಾಂಪಿದೆ ವಲಂ[11]ಧೀರಂಗೆ[11] ಲಜ್ಜಾಕರಂ॥

ಧರೆಯೊಳ್ ಧರ್ಮಪಥಕ್ರಮಂಗಳೆಸೆಗುಂ ಮತ್ಕೀರ್ತನಂಗಳ್ ಜಯೋ
ದ್ಧುರ[12]ಮುಂಟರ್ಥ[12]ಫಲೋಪಮಾನವೆಮಗೀಹಸ್ತ್ಯಶ್ವತಂತ್ರಂ ಕುಳಾ ।

---

1 ದೊಳ್ಪಿಡಿ (ಓ.ಅ). 2 ಕೊಯ್ದು (ಅ), ತೊಯ್ದು (ಅ.ಓ). 3 ಮಿದುಳಿಂ (ಅ).
4 ನುಗಿವು (ಓ). 5 ಮಾಹಾತ್ಮ (ಓ) 6 ನಜ (ಓ), ನಯ (ಅ). * ಸಾಳ್ವ II. ಸೂ. 63.
7 ದಿವ್ಯ (ಅ). 8 ಳಿಂನೆಗಪಿಕ್ಕಿ (ಅ). 9 ಪೆಱದಿಂ (ಓ,ಅ), ಪೆಱರಿಂ, ಪಸಮಂ (ಅ).
10 ತಗುಳ್ದಂ (ಅ). 11 ವೀರಂಗೆ (ಅ.ಓ). 12 ಮುಂಟಾರ್ಥ (ಅ.ಓ).

ಧರಣಂ ಕಾಮಫಲೋಪಮಮಂ ಬಳೆದಪಂ ಮನ್ನಂದನಂ ಸಾಲ್ವ[1]ದಿ
ನ್ನಿರವೇಂ[1] ಮೋಕ್ಷಮಹಾಮಹೀರುಹಫಲೈಕಾ[2]ಸ್ವಾದಮಂ[2] ನೋಡುವೆಂ ॥

## ಸೂತ್ರಂ ೨೦೬

* ಕರುಣಾರಸಕ್ಕೆ ಮಿಗೆ ಹಾ
ಸ್ಯರಸಂ ಶೃಂಗಾರರಸಕ್ಕೆ ಬೀಭತ್ಸಂ ರೌ ।
ದ್ರ[3]ರಸಕ್ಕಮದ್ಭುತಂ[3] ವೀ
ರರಸಕ್ಕೆ ಭಯಾನಕಂ [4]ನಿರೋಧಕಮಕ್ಕುಂ[4] ॥ ೮೩೧

ಲಕ್ಷ್ಯಂ ॥

† ಕರಜಕ್ಷತಗಳಿತಾಸ್ಥಾ
ನುರಕ್ತಕರ್ದಮಿತವಿಗ್ರಹಂ [5]ಸುವ್ರಣಿತಾ[5] ।
ಧರಜಾತಿಪೂತಿಗಂಧಂ
ತರುಣೀಮುಖಮೆನಗೆ ಪಡೆದುದೊದವಿದಲಂಪಂ ॥ ೮೩೨

## ಸೂತ್ರಂ ೨೦೭

‡ ಎರಡುಂ ವಿರುದ್ಧರಸಮೊಡ
ವೆರಸಿರೆ ತದವಾಂತರಸ್ಥಮೊಂದನ್ಯರಸಂ ।
ಪರಿಪುಷ್ಟಮಾಗೆಯುಂ ವ್ಯತಿ
ಕರಣಂ ಮೇಣ್ ತಾಮವಾಗೆಯುಂ ನಿರ್ದೋಷಂ ॥ ೮೩೩

ಲಕ್ಷ್ಯಂ ॥

§ ಅರುಣಜಳಾವ[6]ಲಿಪ್ತಿ ಪೊಸಗುಂಕುವ[6]ದಂತಿರೆ ಕರ್ಣಲಗ್ನತೋ
ಮರಮವತಂಸದಂತಿರೆ [7]ನಖವ್ರಣ[7]ರಾಜಿ ವಿಭೂಷಣಾಳಿಯುಂ ।
ತಿರೆ ಮಿದುಳುಣ್ಮಿ ಪುಷ್ಪಕೃತಶೇಖರದಂತಿರೆ ಕೊಂಡು ಪೋದರ
ಚ್ಚರಸೆಯುರಣ್ಮಿ ಬಿಟ್ಟ ಭಟರಂ ಕೊನೆಮಿಾಸೆಯ ಚೆನ್ನಪೊಂಗರಂ ॥ ೮೩೪

ಭಯದಿಂ ಕರ್ಚಿದುದೊಂದು ಪುಲ್ ಮುಗಿದ ಕೆಯ್ ಬಿಟ್ಟಿರ್ದ ಕೇಶಂಗಳುಂ
ನಯನಾಂಧಃಪ್ಲವಮೋಡುವಲ್ಲಿ ಪಿರಿದುಂ ಕಾರುಣ್ಯಮಂ ಮಾಡೆ ವೈ ।

---

1 ದೆನ್ನಿರಏಂ, ದಿನ್ನರವೆಂ, ದಿನ್ನರದೆಂ (ಅ). 2 ಸ್ವಾದನಂ (ಓ.ಅ) ಸಾರಮಂ(ಅ)
* ಸಾಳ್ವ II. ಸೂ 68. 3 ರಸೋಕ್ತಿಗದ್ಭುತಂ (ಓ.ಅ). 4 ಪಿರೋಧಿಗಳಕ್ಕುಂ (ಅ)
† ಸಾ ್ವ II. 125. 5 ಸವ್ರಣಿತಾ (ಅ). ‡ ಸಾಳ್ವ II. ಸೂ 69. § ಸಾಳ್ವ
II. 126, 127. 6 ಳಿಪ್ತನವಕರ್ದಮ (ಅ), ಳಿಪ್ತನರಕರ್ದಮ (ಓ.ಅ). 7 ನವಗ್ರಹ
(ಓ), ನವವ್ರಣ (ಅ.ಇ).

ರಿಯನಾಗಳ್ ನಗುವಂತಿರಿರ್ದುದು ಕನತ್ಸಟ್ಗಂ ವಿನಿರ್ಭಿನ್ನಕುಂ
ಭಯುಗೋದ್ಯದ್ದ್ವಿಪಮೌಕ್ತಿಕಾಳಿಕಳಿತಂ ಶ್ರೀವಿಪ್ರಮಾರ್ತಾಂಡನಾ ‖ ೮೩೫

## ಸೂತ್ರಂ ೨೦೮

ವೀರಂ ಗೌರಂ ರೌದ್ರಮು
ದಾರಕ್ತಂ ಪೀತಮದ್ಭುತಂ ಶ್ಯಾಮಂ ಶೃಂ ।
ಗಾರಂ ಶ್ವೇತಂ ಹಾಸ್ಯಂ
ಕಾರುಣ್ಯಂ ಧೂಮ್ರಸಿತಮುಟಿದುವವೆರಡುಂ ‖ ೮೩೬

## ಸೂತ್ರಂ ೨೦೯

ವೃತ್ತಿಭೇದಂಗಳ್

ಭಾರತಿಯ ಕೊಂಕು ಸತ್ವೋ
ದಾರತೆ ಸರಸಾರ್ಥ[1]ಮುದ್ಧತಸ್ಥಿತಿ[1]ಯಿವಱಿಂ ।
ಭಾರತಿ ಸಾತ್ವತಿ ಕೈಶಿಕಿ
ಯಾರಭಟಿಯೆನಿಪ್ಪ ವೃತ್ತಿಗಳ್ ನಾಲ್ಕಕ್ಕುಂ । ೮೩೭

## ಸೂತ್ರಂ ೨೧೦

ವಿದ್ವಜ್ಜನಹೃದಯಂಗಮು
[2]ಸದ್ವಕ್ರೋಕ್ತಿ[2]ಪ್ರಕಾಶಮದ್ಭುತಹಾಸ್ಯೋ ।
ದ್ಯದ್ವಸ್ತುವೃತ್ತಿ ಸಲೆ ರಸ
ವದ್ವಚನದೊಳೆಸೆಯೆ ಪೇೞ್ಗೆ ಭಾರತಿಯಿಂದಂ ‖ ೮೩೮

## ಸೂತ್ರಂ ೨೧೧

ಚಾಗಂ ಬೀರಂ ಸೊಬಗೆಂ
ಬೀಗುಣಮುಂ ಶಾಂತವೃತ್ತಿಯುಂ ಸಾಹಸದು ।
ದ್ಯೋಗಮುಮತಿಲಲಿತಸದಾ
[3]ಭೋಗ[3]ದೊಳಿಂಬಾಗೆ ರಂಜಿಕುಂ ಸಾತ್ವತಿಯೊಳ್ ‖ ೮೩೯

---

1 ಮುದ್ಧುರ (ಅ.ಓ).
2 ಸದ್ವಕ್ರೋಕ್ತಿ, ಸದ್ವರ್ಣೋಕ್ತಿ (ಅ).
3 ಭಾಗ (ಅ).

## ಸೂತ್ರಂ ೨೧೨

ನಗರಾದಿವರ್ಣನಂ ನೃ
ತ್ಯಗೀತವಾದ್ಯಪ್ರಯೋಗಮಬಳಾವಿಷಯೋ |
ಪಗಮವ್ಯವಹೃತಿಯೆಂಬಿವು
ನೆಗಳ್ಗುಂ ಮೃದುಮಧುರರಚನೆಯಿಂ ಕೈಶಿಕಿಯೊಳ್॥ ೮೪೦

## ಸೂತ್ರಂ ೨೧೩

ಕ್ರೂರಾಸ್ತ್ರಪಾತಚಿತ್ರಮ
ಹಾರಣಮಹೇಂದ್ರಜಾಲರೌದ್ರಾದಿರಸಂ |
ಚಾರುತರಸ್ಫುಟಬಂಧದೊ
ಳಾರಭಟೀವೃತ್ತಿಯಿಂದಭಿವ್ಯಂಜಿಸುಗುಂ ॥ ೮೪೧

ಇದು ರೀತಿಕ್ರಮರಸನಿರೂಪಣದೊಳ್ ರಸಪ್ರಕರಣಂ ದ್ವಿತೀಯಂ ॥

ಗೀತಿಕೆ॥ * ರೀತಿಯಂ ರಸವಿಭಾಗಮುಮಂ ವಿ
ಖ್ಯಾತಿಯನಾಂತವೃತ್ತಿಗಳಂ ಪ್ರಾ |
ತೀತಿಕಮಾಗೆ ತಿಳಿಯೆ ಪೇೞ್ದನಿಂತೀ
ಭೂತಳದೊಳ್ ಸಲೆ ನಾಗವರ್ಮಂ ॥ ೮೪೨

ವೃ॥ ಧರೆಯೆಂತಂತೆ ರಸಾಶ್ರಯಂ ಜಲಧಿಯೆಂತಂ[1] ತಾತ್ತ[1] ಗಾಂಭೀರ್ಯಮಂ
ಬರಮೆಂತಂತೆ ಸದಾವೃತಂ ದೆಸೆಗಳೆಂತಂತೂರ್ಜಿತಂ ಸಂದ ಮಂ |
ದರಮೆಂತಂತೆ ಸುವರ್ಣಭಾಸಿ [2]ಶಶಿ[2] ಯೆಂತಂತುಜ್ವಳೋದ್ಯತ್ಕಳಾ
ಸ್ಫುರಿತಂ ಭಾವಿಸೆ ನಾಗವರ್ಮರಚಿತೋದಾತ್ತಪ್ರಬಂಧಾನ್ವಯಂ ॥ ೮೪೩

ಇದು ಸಕಳಸುಕವಿಜನಮನಸ್ಸರೋಜನೀರಾಜಹಂಸಾಯಮಾನಾನೂನ
ಕವಿತಾಗುಣೋದಯಂ ಶ್ರೀನಾಗವರ್ಮವಿರಚಿತಮಪ್ಪ
ಕಾವ್ಯಾವಲೋಕನದೊಳ್ ರೀತಿಕ್ರಮರಸನಿರೂಪಣಂ
ಚತುರ್ಥಾಧಿಕರಣಂ



---

* ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಕೆಳಗೆ ಕಂಡಂತೆ ಬರೆದಿದೆ :—
ರೀತಿರಸಭಾಗಮಂ ವಿ ॥ ಖ್ಯಾತಿಯನಾಂತಮಳವೃತ್ತಿವೃತ್ತಂಗಳುಮಂ॥
ಪ್ರಾತಿಕಮಾಗಿರೆ ಪೇೞ್ದಂ । ಭೂತಳದೊಳಗೆಸೆಯೆ ನಾಗವರ್ಮಕವೀಂದ್ರಂ ॥

1 ತಾಪ್ತ (ಅ). 2 ರವಿ (ಅ).

# ಕವಿಸಮಯಾಧಿಕರಣಂ

---

## ಸೂತ್ರಂ ೨೧೪

* ಆವುದಶೇಷಲೋಕವಿಷಯಸ್ಥಿತಿಯಲ್ಲಖಿಳಾಗಮಾರ್ಥಮುಂ
ಭಾವಿಪೊಡಲ್ಲು ಸತ್ಕವಿಪರಂಪರೆಯಿಂ ಪರಿಗೀತಮಾಗಿ ನಿ ।
ಷ್ಕೇವಳ[1]ಮಾದ[1] ರೂಢಿವಶದಿಂ ಸಲೆ ಸಲ್ವು[2]ದಿದಲ್ತೆ[2] ಶಿಷ್ಟಸಂ
ಭಾವಿತಮಪ್ಪ ಕಾವ್ಯಸಮಯಂ ಭುವನತ್ರಯವಸ್ತುಗೋಚರಂ ॥

## ಸೂತ್ರಂ ೨೧೫

† ಆತತಸತ್ಕವಿಸಮಯಂ
ಜಾತಿದ್ರವ್ಯಕ್ರಿಯಾಗುಣಾಶ್ರಯಮಸದಾ ।
ಖ್ಯಾತಿ ಸದಕೀರ್ತನಂ ನಿ
ರ್ಣೀತಂ ನಿಯಮಾರ್ಥಮೈಕ್ಯಮೆನೆ ನಾಲ್ಕು ತೆಱಂ ॥ ೮೪೫

# ಅಸದಾಖ್ಯಾತಿ ಪ್ರಕರಣಂ

## ಸೂತ್ರಂ ೨೧೬

ಸಲಿಲಾಶ್ರಯಮಾತ್ರದೊಳಂ
ಕಲಹಂಸಪ್ರಭೃತಿನದಿಗಳೊಳ್ ಕಮಲಸಿತೋ ।
ತ್ಪಲಕುವಲಯಾದಿಶೈಲಾ
ವಲಿಯೊಳ್ ರತ್ನಾದಿಯುಂ ಪ್ರಯೋಗಿಸೆಪಡೆಗುಂ ॥ ೮೪೬

ಲಕ್ಷ್ಯಂ ॥
ಜಲಾಶ್ರಯಮಾತ್ರದೊಳ್ ಹಂಸಾದಿಗಳ್ಗೆ ॥

ವೃ॥ ಜಕ್ಕವಕ್ಕಿಗಳಿಂ ಕಳಹಂಸೆಯಿಂ
[3]ಮಿಕ್ಕ ಸಾರಸದಿಂ ಕುರರಂಗಳಿಂ[3] ।

---

* ಕಾವ್ಯಮೀಮಾಂಸೆ p. 78. 1 ಮಾಗಿ (ಅ). 2 ದದಲ್ತೆ (ಅ). † ಕಾವ್ಯಮೀಮಾಂಸೆ ಪು. 79; *cf.* ಕಾವ್ಯಕಲ್ಪಲತಾವೃತ್ತಿ. I. V. 94. ಓಲೆ ಪ್ರತಿಯಲ್ಲಿ "ಅವಱೊಳ್ಸನ್ನಿಬಂಧನಮದೆಂತೆನೆ" ಎಂದು ೨೧೬ನೆಯ ಸೂತ್ರದ ಮುಂದೆ ಇದೆ. ಅಸನ್ನಿಬಂಧನವೆಂದಿರಬಹುದು. 3 ಕುಕ್ಕುರಂಗಳಿಂದೆಸೆವಸಾರಸಂಗಳಿಂ (ಬ).

ಮೊಕ್ಕಳಂ ಸೊಗಯಿಪ್ಪುದು ನೋಡ ನೋ
ಟಕ್ಕೆ ಚೆಲ್ವೆಸೆದಿಲ್ಲಿಯ ಪೂಗೊಳಂ ॥ ೮೪೭

ನದಿಯೊಳ್ ಕಮಲಾದಿಗಳ್ಗೆ ॥

ಸರಯೂನದ್ಯರವಿಂದಮಂದಮಕರಂದಸ್ಯಂದಿ ಗಂಗಾಂಬುಶೀ
ಕರಸಂಸಂಗಿ ಲತಾಭಿರಾಮಲಲನಾ[1]ಲಾಸ್ಯೈಕ[1]ಶೈಲೂಷನ ।
ದ್ರಿರುಹಕ್ರೋಡನಿಪಾತಿ [2]ಮಾಲ್ಯವದನು[2]ಪ್ರಸ್ಥೋತ್ಥಿತಂ ಯಾಮುನೋ
ದರಕುಂಜಸ್ಥಿತಿ ಮೆಲ್ಲನಲ್ಲಿ ಸುಟಿಗುಂ ಬಂದೊಂದು ಮಂದಾನಿಳಂ ॥ ೮೪೮

ಕುವಲಯವನರುಚಿಯಿಂ ಜಾ
ಹ್ನವಿಯ ಜಳಂ ಕರಮೆ ಕಟ್ಟಿ ತೋಱಿದುದಂತಾ ।
ಪ್ಲವಗಧ್ವಜಂಗೆ ಯಮುನಾ
ಪ್ರವಾಹಸಂಭೇದಮಾದ ತೆಱದಿಂದಾಗಳ್ ॥ ೮೪೯

ಶೈಲದೊಳ್ ರತ್ನಾದಿಗಳ್ಗೆ ॥

ಕಳಧೌತೋಚ್ಚಶಿಲೋದ್ಗತಾಂಶುವಿಲಸತ್ಪಾದಂ ಸ್ಫುಟಸ್ಫಾಟಿಕೋ
ಪಳ[3]ಧಾಮೋ[3]ಜ್ವಳಮಧ್ಯಮಂಬುರುಹರಾಗೋದಗ್ರಪಾಷಾಣಭಾ ।
ವಳಯೋದ್ಭಾಸಿ ನಿಜೋಪಕಂಠ[4]ಮಸಿತ[4]ಚ್ಛಾಯಾಂತರತ್ನಪ್ರಭಾ
ವಿಳಮೂರ್ಧಂ ನಡೆ ನೋಡೆ ಪೋಲ್ತುದು ನಗಾಧೀಶಂ ಖಗಾಧೀಶನಂ ॥

ಮರಕತದ ಕಲ್ಲ [5]ಕವಿ[5]ಗಳೊ
[6]ಳೆರಡಱಿಯದೆ ಕೂರ್ತ[6] ಧೂರ್ತ ಸುರಮಿಥುನಂಗಳ್ ।
ನೆರೆದಳಸುಗಲಿಸೆ ಗಿಳಿಯುಂ
ಪುರುಳಿಯುಮಳಸುವುವು ದೇವಭಾಷೆಗಳಳಸಂ ॥ ೮೫೧

ಅಂತಲ್ಲದೆಯುಂ ಧನದನ
ಗಂ ತನಗಟ್ಟಿದೊಡೆ ರಾಯಭಾರಿತನಂ ಬಂ ।
ದಂತಿರ್ಪುವಿದಱ ಕುಂಜೋ
ಪಾಂತದ [7]ತಟತಟಿಸಿ[7] ಪೋಳೆವ [8]ಕುಳಿಶಾಶ್ಮಂಗಳ್[8] ॥ ೮೫೨

ಇದು ಜಾತಿ ॥

## ಸೂತ್ರಂ ೨೧೭

* ತಮದೊಡ್ಡು ಮುಷ್ಟಿಸಂಗ್ರಾ
ಹ್ಯಮಭೇದ್ಯಂ ಸೂಜಿಗಪ್ಪೊಡಂ ತಾನೆನೆಯುಂ ।

---

1 ಲಾಸ್ಯೋಪ ; ಳಿಸ್ಯೈಕ (ಅ). 2 ಪಾಳವವಧೂ (ಅ). 3 ದಲ್ಪೋ (ಓ).
4 ಮಹಿತ (ಅ). 5 ಕಣ್ (ಅ). 6 ಳೆರಡಿಲ್ಲದೆ ಕೂಡಿ ಕೂರ್ತು (ಅ). 7 ತಳದಳಿಸಿ (ಅ).
8 ಕುಳಿಶಾಸ್ತ್ರಂಗಳ್ (ಅ). * ಕಾವ್ಯಮೀಮಾಂಸೆ p. 80. *cf.* ಕಾವ್ಯಕಲ್ಪಲತಾವೃತ್ತಿ.

ಕುಮುದಪ್ರಿಯಾತಪಂ ನಾ
ವ್ಯಮಂಜಳಿಗ್ರಾಹ್ಯಮೆನೆಯುಮಿಷ್ಟಮಿವಕ್ಕುಂ ॥ ೮೫೩

ಲಕ್ಷ್ಯಂ ॥
ತಮಕ್ಕೆ ॥

ಪೊದೆದ ಮದವನ್ಮಾತಂಗೇಂದ್ರಾಜಿನಾಂಬರಮಂ ನಿಮಿ
ರ್ಚಿದಪನಥವಂ ತಾನೆಂಬಂತಾಗೆ ಪೆರ್ಚಿದಗುರ್ವಿನೊಳ್ ।
ಪುದಿದೊದವಿನಿಂ ಸೂಚೀನಿರ್ಭೇದ್ಯಮಪ್ಪಿನವೊಯ್ದು ಪ
ರ್ವಿದುದುದಸದಳಂ ಮುಷ್ಟಿಗ್ರಾಹ್ಯಂ ತಮಂ ಭುವನಾಂತಮಂ ॥ ೮೫೪

ಚಂದ್ರಾತಪಕ್ಕೆ ॥

[1]ಬೆಲಗಸೆದೀವಿ[1]ಕೊಂಡು ಕುಡಿಯಲ್ ಪೊಗೆಯಲ್ ಕೊಡಗೊಂಡು ತಿರ್ದಿ ಬ
ಟ್ಟಲ[2]ನೆಳ[2]ದೋಂಟದೊಳ್ ಪರಿಯಿಸಲ್ ಪಱುಗೋಲ್ಗಳನಿಕ್ಕಿ ಪಾಯಿಸಲ್ ।
ನೆಲೆಯಿನಿಸೆಂದು ನೋಡಲೊಳಪೊಕ್ಕು ದುಡುಂಮಿೞ್ದಾಡಲೀಸಲ
ಗ್ಗಲಿಸಿದಲಂಪಿನಿಂ ಬಗೆ[3]ದುದಂದು ಜನಂ ಘನಚಂದ್ರಿಕಾಂಬುವಂ[3] ॥ ೮೫೫

ಇದು ದ್ರವ್ಯಂ ॥

## ಸೂತ್ರಂ ೨೧೮

* ಇರುಳೊಳ್ ಚಕ್ರಾ[4]ಹ್ವಯಯುಗ[4]
ವಿರಹಾರ್ತಿಚಕೋರಚಂದ್ರಿಕಾಪಾನಮಿವಿಂ ।
ತೆರಡುಂ ಕ್ರಿಯಾತ್ಮಕಂಗಳ್
ವಿರಚಿಸೆ [5]ಪಡೆಗುಂ[5] ಪ್ರಯೋಗಗತಿಲಕ್ಷ್ಯಂಗಳ್ ॥ ೮೫೬

ಲಕ್ಷ್ಯಂ ॥
ಪ್ರಥಮಕ್ಕೆ ॥

ನೆರೆವನ್ನಂ ರವಿ ನಿಲ್ಲ[6]ದಸ್ತ[6]ಗಿರಿಯಂ ಸಾರ್ದಂ ಪ್ರಿಯಂ ಪೋಗಲಾ
ತುರನಾಗಿರ್ದನೆನುತ್ತುಮತ್ತಿನನ[7]ಸಿತಾತ್ತ[7]ತ್ಮೇಶನಂ ನೋಡಿ ಕೋ ।
ಪರಸಾ[8]ವೇಶ[8]ಮನೊಂದು ಶೋಕರಸಮಂ ಮತ್ತೊಂದು ಕಣ್ ಕೆಯ್ಕೊಳು
ತ್ತಿರೆ ಕೆಯ್ಕೊಂಡುದು ಚಕ್ರವಾಕವಧು ಕಣ್ಗೆತ್ತಂ ನದೀಲೀಲೆ[9]ಯಂ[9] ॥ ೮೫೭

ಬಿಸರುಹಸಖನಸ್ತಾದ್ರೀಂದ್ರಮಂ ಪೊರ್ದೆ ಪೋದಯ್
ಬಿಸುಟನಿಯನೆ ನೀನುಂ ನಿನ್ನ ಬೆಂಬೆನ್ನೊಳೆನ್ನೀ ।
ಯಸುವುಮಿರದೆ ಪೋಗಲ್ಕಿರ್ದುದೆಂದಿಂತೊನಲ್ಗುಂ
ಕುಸುಮಶರಶಲಾಕಾಕೀಲಿತಾಂಗಂ ರಥಾಂಗಂ ॥ ೮೫೮

---

1 ಬೆಲಗಸೆತೀವಿ; ಬೆಲಸಗೆದೀವಿ (ಅ). 2 ನೆಳೆ, ನೆಲ (ಅ). 3 ಗೆಳಸಿದರ್ ಘನ ಚಂದ್ರಿಕೆಯಂ ಲತಾಂಗಿಯರ್ (ಅ). ದೆಳಸಿದರ್ಘನಚಂದ್ರಿಕೆಯಂ ಲತಾಂಗಿಯರ್ (ಓ). 4 ಹ್ವದ್ವಯ. * ಕಾವ್ಯಮೀಮಾಂಸೆ P. 81. *cf.* ಕಾವ್ಯಕಲ್ಪಲತಾವೃತ್ತಿ. 5 ಪಡುಗುಂ. 6 ನಸ್ತ. 7 ನಿಂತಾ (ಓ). 8 ವೇಗ. 9 ಯಿಂ.

ಸರಸಿಜಷಂಡದ ತೆರೆಗಳ್
ತೆರಳ್ವಿನಂ ಕಮಳಪತ್ರಚಯಮೆನಿತನಿತುಂ |
ಕೊರಗುವಿನಂ ಬಿಸುಸುಯ್ದ್ದೀಂ
ಬಿರಯಿಸಿದುವೊ ಚಕ್ರವಾಕಮಿಥುನಮವಿರುಳೊಳ್ || ೮೫೯

ದ್ವಿತೀಯಕ್ಕೆ ||

ಮನವಮು[1]ನೆಱನಲ್ಬುವಂ[1] ಕಿರಣಜಾಲದಿನಂತವು [2]ಪೋಗೆ[2] [3]ಮುಟ್ಟು[3]ಗೆ
ಟ್ಟನಿತಱೊಳಡ್ಡಡಂಗಿ[4]ದಪನಂ[4]ತದಱಿಂದೆರೆದಪ್ಪೆ ನೇಣಲಾಂ |
ಘನನ ಕರಂಗಳುಳ್ಳನಿತುಮಮಂ ತವೆ ಪೀರೆನುತುಂ ಚಕೋರಲೋ
ಚನೆ ಪಿರಿ[5]ದಪ್ಪ ನಲ್ಮೆ[5]ವೆರಸಟ್ಟಿಱೊಳಂದೆರೆದಳ್ ಚಕೋರವಮಂ || ೮೬೦

ಇದು ಕ್ರಿಯೆ ||

## ಸೂತ್ರಂ ೨೧೯

* ಹಸಿತಯಶಃಪ್ರಭೃತಿಯೊಳು
ಲ್ಲಸಿತಂ ಸಿತಭಾವಮಯಶದೊಳ್ ಪಾಪದೊಳಂ |
ತಸಿತರುಚಿ ಕೋಪರಾಗ
ಪ್ರಸರದೊಳಾರಕ್ತವರ್ಣ[6]ಮಭಿವರ್ಣಿಸುಗುಂ[6] || ೮೬೧

ಲಕ್ಷ್ಯಂ ||

[7]ಹಸಿತಯಶಃಪ್ರಭೃತಿಗೆ[7] ||

ಬೆಳಪ ಮುಖಚಂದ್ರನೊಳ್ ತಳ
ತಳಿಸುತ್ತುಂ ತೊಳಗಿ [8]ಪೊಳೆವ[8] ಬೆಳ್ದಿಂಗಳ[9]ದೊಂ[9] |
ದಳವನಳವಡಿಸಿ ಕರಮು
ಜ್ವಳಿಪ ಮುಗುಳ್ನಗೆ ಬೆಡಂಗು ನೃಪನಂದನೆಯಾ || ೮೬೨

ಹರಹಾಸದ್ಯುತಿಯುಂ ನಿರಾಕರಿಸಿ ಗಂಗಾಸಿಂಧುಕಲ್ಲೋಲಶೀ
ಕರಮಂ ನಿಂದಿಸಿ ಸಿಂಧುವಾರಕುಸುಮಶ್ರೀಯುಂ ಪಳಂ[10]ಚಾಡಿ ಭಾ[10] |
ಸುರಚಂದ್ರಾಂಶುವಿ[11]ಕಾಸ[11]ಮುಂ ತೆಗಟ್ದು ಮುಕ್ತಾಹಾರವಿಸ್ತಾರಡಂ
ಬರಮಂ ಮಿಕ್ಕು ಬೆಳಪ್ಪುದುಜ್ವಳಯಶಂ ಶ್ರೀಗಂಡಮಾರ್ತಂಡನಾ || ೮೬೩

ನಂದನನೊಸಗೆಯುಮಾ[12]ಮಕ
ರಂದಕ[12]ನೆಳಸಿರದೆ [13]ಬಿಟ್ಟು ಪೋದೊಂದಟಲುಂ[13] |

---

1 ನೊಱಲ್ಚು (ಅ). 2 ಪೋಗಿ (ಓ). 3 ಮುಂದು (ಆ.ಓ). 4 ಸವನಂ (ಅ.ಓ). 5 ದೊಂದು ಸಲ್ಗೆ (ಅ.ಓ). * ಕಾವ್ಯಮೀಮಾಂಸೆ. P 83. 6 ಮದುವರ್ಣಯುತಂ; ಮದುವರ್ಣೀಯಂ, (ಅ), ಮದುವರ್ಣೀತಂ. 7 ಹಸಿತಸಿತ (ಓ). 8 ಬೆಳಪ (ಅ). 9 ಗೊಂ (ಅ). 10 ಚಲ್ ವಿಭಾ (ಅ.ಓ). 11 ಳಾಸ (ಅ.ಓ). 12 ಮಧ ಕಂದಕ (ಅ). 13 ಬಿಸುಟುಪೋದೊಡೆಯುಬಲುಂ (ಅ.ಓ).

ಕುಂದದೊಡನಲೆಯೆ ಸತಿ ಕಾ
ಳಿಂದಿಯ ಸುರನದಿಯ ಕೂಡಲಂ ಪೋಲ್ತಿರ್ದಳ್ ‖ ೮೬೪

ಅಯಶಃ ಪಾಪಂಗಳ್ಗೆ ‖

ವಿಳಸದಮೃತಾಂಶುಮಂಡಲ
[1]ದೊಳೆ ಕಱೆಯೆಂತಂತೆ[1] ನೆಗಱೆ ದುರ್ಯಶದಿಂದಂ ।
ಖಳನಾನೃಪಾತ್ಮಜಂ ನಿ
ರ್ಮಳನಿಜವಂಶಕ್ಕೆ ಮಾಡಿದಂ ಮಳಿನತೆಯಂ ‖ ೮೬೫

ದೊರೆ[2]ಕೊಂಡ[2] ಪಾಪಲೇಶ್ಯಾ
ಪರಿಣಾಮಮೆ[3] ಕೃಷ್ಣವರ್ಣಮಂ[3] ಪುಟ್ಟಿಸಿದಂ ।
ತಿರೆ ಕಡುಗಲಿಯರವಂಧಿರ್
[4]ಪರುಷ[4]ಸ್ವರ[4]ಪರುಷ[4]ನಯನ[5]ಪರುಷ[5]ಶರೀರರ್ ‖ ೮೬೬

ಕೋಪರಾಗಂಗಳ್ಗೆ ‖

ಅವತಂಸಾಶೋಕನವ
ಪ್ರವಾಲರುಚಿ ಮುಳಿಸೆ ರೂಪುಗೊಂಡವೊಲೆರಡುಂ ।
ಕಿವಿಗಳೊಳ್[6]ಮಾಯುಮಂ[6] ಪ
ರ್ಚುವ [7]ಕಲ್ಪಿಯು[7] ತೆಱದಿನೆಸೆದುದಾಸ್ಥಾಯಿಕೆಯೊಳ್ ‖ ೮೬೭

ಕುಂಕುಮದ [8]ಕದಡು[8]ನೀರಂ
ಭೋಂಕೆನೆ ಮೇಲೊತ್ತೆ [9]ನೃಪತಿ[9] ಮೆಯ್ಯಿಂ ರಾಗಂ ‖
ತಾಂ ಕರಮೆ ತೀವಿ ಪೊಱಗೆ ತು
ಳುಂಕುವವೋಲ್ ತೋಱೆ ನೀಱೆ ಕಣ್ಗೆಸೆದಿರ್ದಳ್ ‖ ೮೬೮

ಇದು ಗುಣಂ ‖

ಇದು ಕವಿಸಮಯದೊಳ್ ಅಸದಾಖ್ಯಾತಿಪ್ರಕರಣಂ ಪ್ರಥಮಂ.

---

# * ಸದಕೀರ್ತನ ಪ್ರಕರಣಂ

## ಸೂತ್ರಂ ೨೨೦

† ಅಸುಕೆಯ ಕುಜದೊಳ್ ಫಳಮಂ
ವಸಂತದೊಳ್ ಜಾತಿಕುಸುಮಮಂ ಚಂದನದೊಳ್ ।

---

1 ದೊಳಗಣಕಱೆಯಂತೆ (ಅ). 2 ಕೊಂಡು (ಅ). 3 ಪಾಪರೂಪಮಂ (ಅ.ಓ). 4 ಪುರುಷ (ಅ). 5 ಪಕ್ಷ, ಪುರುಷ (ಅ). 6 ಮಾಂಸಮಂ (ಅ.ಏ). 7 ಕಲ್ಪಿಪ (ಅ). 8 ಕಡುಕು (ಅ). 9 ನೃಪನ (ಅ.ಓ). * ಮತ್ತಮಲ್ಲಿ ಸದಕೀರ್ತನ ಪ್ರಕರಣಮೆಂತೆಂದೊಡೆ (ಓ). † ಕಾವ್ಯಮೀಮಾಂಸೆ. P 80.

ಕುಸುಮಫಲಮೆಂಬಿವಂ ಬ
ಣ್ಣಿಸದಿರ್ಪುದು ತಾಮವಲ್ಲಿ ಸಂಭವಿಸುವೊಡಂ ‖ ೮೬೯

ಲಕ್ಷ್ಯಂ ‖

ಕುಸುಮಕಿಸಲಯಮೆ ಲೋಕ
ಕ್ಕೆಸೆವುತ್ತಂಸಾವತಂಸಮೆನೆ ಸಾಲದೆ ಸಂ ।
ದಸುಕೆಗೆ ನಿಸ್ಸಾರಫಲ
ಪ್ರಸೂತಿ ಮತ್ತಂತದಾದೊಡೇನಾಗದೊಡೇಂ ‖ ೮೭೦

* ಎನಿತು ಸುಮನಸ್ಸಮುನ್ನತಿ
ತನಗಾದೊಡಮಭಿವಿನೂತಜಾತಿವಿಕಾಸ ।
ಕ್ಕನಿತೆಡೆಗುಡದುದಱಿಂ ಕುಲ
ಜನದ ವಿಭೂತಿಯನೆ ಸುರಭಿಸಮಯಂ ಪೋಲ್ಕುಂ ‖ ೮೭೧

* ಬಿದಿವಸದೆ ಕುಸುಮಫಲಮಿ
ಲ್ಲದಿದರ್ೊಡಂ ತನ್ನದೊಂದು ಮೆಯ್ಯಿಂದಂ[1] ಲೋ ।
ಕದ ಸೇದೆಯೆಲ್ಲಮಂ[1] ಕಿಡಿ
ಸಿದಪುದು ಚಂದನಮೆ ವಂಧ್ಯಜನ್ಮಂ ಕುಜದೊಳ್ ‖ ೮೭೨

ಇದು ಜಾತಿ ‖

## ಸೂತ್ರಂ ೨೨೧

† ಸಿತಪಕ್ಷದೊಳುಳ್ಳೊಡಮಂ
ಧತಮಸಮಂ ಕೃಷ್ಣಪಕ್ಷದೊಳ್ ಚಂದ್ರಿಕೆಯಂ ।
ಕೃತಮತಿಗಳ್ ಕವಿಮಾರ್ಗಾ
ಶ್ರಿತಗತಿಗಳ್ ಪೇೞದಿರ್ಕೆ[2]ದೆಂತುಂ[2] ಕೃತಿಯೊಳ್ ‖ ೮೭೩

ಲಕ್ಷ್ಯಂ ‖

ಇಡಿದಿರೆ ಗುಹಾಂಧಕಾರಂ
ಪೊಡರ್ದೆಸೆದಿರೆ ಚಂದ್ರಕಾಂತರುಚಿ ನಗದೋಳೊಂ ।
ದೆಡೆಗಳ್ ಪೋಲ್ತಪ್ಪುವದೊಂ
ದೆಡೆಯೊಳ್ ನೆಲೆಸಿರ್ದ ಕಾಳಮಂ ಜೊನ್ನಮುಮಂ ‖ ೮೭೪

ಇದು ದ್ರವ್ಯಂ ‖

---

* c. p. ಕಾವ್ಯಮೀಮಾಂಸೆ, p. 80. 1 ಲೋಕದೊಳಾದ ಸೇದೆಯಂ (ಅ).
† ಕಾವ್ಯಮೀಮಾಂಸೆ p. 81. 2 ದೆಂದುಂ (ಅ.ಓ)

## ಸೂತ್ರಂ ೨೨೨

* ದಿವಸದೊಳಸಿತಾಬ್ಜವಿಕಾ
ಸವುಮಂ ಶೇಫಾಳಿಕಾಶ್ರುಬಿಂದುಪರಿಭ್ರಂ ।
ಶವುಮಂ ಪೇಟಿಲ್ಕಾಗದು
ಸವವಾಯಂ ಸಮನಿಸಿರ್ಪೂಡಂ ಸತ್ಕೃತಿಯೊಳ್ ॥ ೮೭೫

ಲಕ್ಷ್ಯಂ ॥

ಪಗಲ್ ರತಾರಂಭದೊಳಿರ್ದಿರುಳ್ ಕನ
ಲ್ವಗಲ್ವ ಚಕ್ರಾಹ್ವಯುಗಂಗಳಟ್ಟಿಱಂ ।
ಮೊಗಕ್ಕೆ ತರ್ಪಂತ[ಲ]ರಲ್ ತಗುಳ್ದುವೆ
ಲ್ಲಿಗಂ ರಜಂ ಪೊಣ್ಮೆ ಮಹೋತ್ಪಳಾದಿಗಳ್ ॥ ೮೭೬

† ಸಸಿಯೆಟ್ಟರಮಂ [1]ಕಂಡೊಗೆ[1]
ದೊಸಗೆ ಮನಕ್ಕಧಿಕಮಾಗೆ ಶೇಫಾಳಿಕೆ ಸಂ ।
ತಸದಿಂದಿಕ್ಕಿದ ಬಾಷ್ಪ
ಪ್ರಸರಮನಿಳಿಸಿದುವು [2]ನಿಶೆ[2]ಯೊಳಲ್ಲೊಕ್ಕಲರ್ಗಳ್ ॥ ೮೭೭

ಇದು ಕ್ರಿಯೆ ॥

## ಸೂತ್ರಂ ೨೨೩

‡ ತತದಶನದ್ಯುತಿಯೊಳರ
ಕ್ತತೆಯನೆ ವಿಕಸತ್ಪ್ರಿಯಂಗು [3]ಸುಮನಸದೊಳಪೀ[3] ।
ತತೆಯನೆ ಪಂಕಜಮುಕುಳ
ಪ್ರತತಿಯೊ[4]ಳಹರಿತ್ವ[4]ವೃತ್ತಿಯನೆ ಪೇಳ್ಗೆ ಬುಧರ್ ॥ ೮೭೮

ಲಕ್ಷ್ಯಂ ॥

ದಶನಾರಕ್ತತೆಗೆ ॥

ತೊಳಪ ದಂತಮರೀಚಿಸಂತತಿ ಪರ್ವಿ ಬಳ್ವಳನೀಳ್ದು ಗೊಂ
ದಳಿಸಿ ಬಾಳಮೃಗಾಂಕದೀಧಿತಿಜಾಳಮಂಜರಿಗಳ್ ಜಗ ।
ದ್ವಳಯಮಂ ಬೆಳಪಂತೆ ಬಂದು ಸಭಾಂತರಾಳಮನೆಲ್ಲಮಂ
ಬೆಳಗೆ ಭೂವಳಯಾಧಿಪಂ ನುಡಿಗುಂ ಸ್ವಚಿತ್ತಗತಾರ್ಥಮಂ ॥ ೮೭೯

---

* ಕಾವ್ಯಮೀಮಾಂಸೆ, p. 82. † ಈ ಪದ್ಯವಾದಮೇಲೆ ಒಂದು ಪ್ರತಿಯಲ್ಲಿ ಕೆಳಗೆ ಕಂಡ ಸೂತ್ರವು ದೊರೆಯುತ್ತದೆ. ಇದು ಸದಕೀರ್ತನ ಪ್ರಕರಣಕ್ಕೆ ಸಂಬಂಧಿಸುವುದಿಲ್ಲ: ಆನೆ ಬದಿರ್ ಪಂದಿ ಮುಗಿಲ್ । ಮಾನಂಬುಧಿಶಂಖಮೆಂಬೀಯೆಂಟುಂ ॥ ಸ್ಥಾನಂಗಳಲ್ಲಿ ಪುಟ್ಟುಗು । ಮೇನಚ್ಚರಿ ತಿಳಿದುನೋಡೆ ಮೌಕ್ತಿಕರತ್ನಂ ॥ 1 ಕಂಡೊ (ಅ.ಇ). 2 ನಿಶಿ (ಅ). ‡ ಕಾವ್ಯಮೀಮಾಂಸೆ, p. 83. 3 ಕುಸುಮದೊಳತಿ (ಅ.ಓ). 4 ಳೀಹರಿತ (ಅ), ಳೀಹರಿಯ ವೃತ್ತಿಪೇಳ್ಗೆಬುಧರ್ಕಳ್ (ಅ.ಓ).

ಕುಂದದಳಧವಳನೃಪದಶ
ನೇಂದುಜ್ಯೋತ್ಸ್ನಾಮೃತಾಚ್ಛಜಲಪರಿಷೇಕಂ ।
ಮಾಂದಿಸುವಂತಾದುದು ನೃಪ
ನಂದನೆಯೆರ್ದೆಯೊಳಗೆ ಬಳೆದ ಶೋಕಾನಳನಂ ॥ ೮೮೦

ಪ್ರಿಯಂಗುಕುಸುಮಾಪೀತತ್ವಕ್ಕೆ ॥

ಇವಳೀಪ್ರಿಯಂಗುಕುಸುಮ
ಚ್ಛವಿಲಸಿತಶ್ಯಾಮಕುಚತಟಾಂತದೊಳೊಪ್ಪಿ ।
ರ್ಪುವು ತಾರಹಾರರುಚಿ ನೀ
ಳವೇದಿಕಾಂತರದೊಳೆಸೆವ ಪೂವಲಿಗಳವೋಲ್ ॥ ೮೮೧

ಪದ್ಮಕುಟ್ಮಳಾಹರಿತತ್ವಕ್ಕೆ ॥

ತೆರೆಯ ಪೊಯ್ಲೊಳೆ ತೆರಳ್ದು ಬರ್ಪ ವಿ
ಸ್ಫುರಿತಶಂಖನಿವಹಂ ಪಯೋಧಿಯೊಳ್ ।
ಕರಮೆ ಚೆಲ್ವೆಸೆದು ಕಣ್ಗೆ ತೋರ್ಕುಮಂ
ಬುರುಹಕು[1]ಟ್ಮಳಕುಳಂಗಳಂತೆವೋಲ್[1] ॥ ೮೮೨

ಇದು ಗುಣಂ ॥

ಇದು ಕವಿಸಮಯದೊಳ್ ಸದಕೀರ್ತನಪ್ರಕರಣಂ ದ್ವಿತೀಯಂ.

---

## * ನಿಯಮಾರ್ಥಪ್ರಕರಣಂ

---

### ಸೂತ್ರಂ ೨೨೪

† ಜಳಧಿಯೊಳೆ ತಿಮಿತಿಮಿಂಗಿಳ
ಗಿಳಮಕರಪ್ರಕರಶಂಖಸಂಭವಮಕ್ಕುಂ ।
ಮಳರಹಿತತಾಮ್ರಪರ್ಣೀ
ಜಳದೊಳೆ ಶುಕ್ತಿಜಮಣಿಪ್ರಕಾಂಡಪ್ರಭವಂ ॥ ೮೮೩

ಲಕ್ಷ್ಯಂ ॥

ತಿಮಿತಿಮಿಂಗಿಳಾದಿಗಳ್ಗೆ ॥

ಮಿಳಿರ್ವರುಣಧ್ವಜಂಗಳ ನೆಟಿಲ್ಗಳನೊಂದೆರೆಗೆತ್ತು ವಾರ್ಧಿಯೊಳ್
ಪೊಳೆವೆಳವಾಳೆಗಳ್ ಕರ್ದುಕೆ ಬಾಳೆಗಳಂ ತಿಮಿ ನುಂಗೆ ನುಂಗಿದಾ ।

---

1 ಟ್ಮಳಂಗಳಾತೆಱನೊಲ್' (ಓ). * ನಿಯಮವ್ಯವಸ್ಥೆಯುಮೆಂತೆಂದೊಡೆ '(ಓ).
† ಕಾವ್ಯಮೀಮಾಂಸೆ, p. 80.

ಗಳೆ ತಿಮಿಯಂ ತಿಮಿಂಗಿಳನಡಂಗುವಿನಂ ತವೆ ನುಂಗೆ ತತ್ತಿಮಿಂ
ಗಿಳಮುಮನಾತಿಮಿಂಗಿಳಗಿಳಂ ತವೆ ನುಂಗಿದುದೊಂದು ತಾಣದೊಳ್‌॥ ೮೮೪

ಕರಿಮಕರಂಗಳುಚ್ಚಳಿತಭಂಗುರತುಂಗತರಂಗಮಾಲೆಯಂ
ಕರರದನಾಗ್ರದಿಂದಿಱಿಯೆ ಮುತ್ತುಗಳಂತಿರೆ ಸೂಸಿ ಪಾಯ್ವ ಶೀ ।
ಕರದೊಳೆ ನಾಂದು ಸೇಡುಗೊಳುತುಂ ಸುಟಿದೂದುವ ಗಾಳಿ ಬರ್ಪ ದೇ
ವರ ವರಕಾಂತೆಯರ್ಕಳ ಪರಿಶ್ರಮಮಂ ಕಳೆದತ್ತು ವಾರ್ಧಿಯೊಳ್‌ ॥ ೮೮೫

ನೊರೆಯಿವಲ್ಲವು ತಳ್ತ ಶಂಖದ ಬಳ್ಳಿಗಳ್ ಬಡಬಾನಲಾಂ
ಕುರಮಿವಲ್ಲವು ರತ್ನದೀಧಿತಿಗಳ್ ತರಂಗಮಿವಲ್ಲ[1]ವು[1] ।
ದ್ದುರಕುಳಾಚಳಪಙ್ತಿಗಳ್ ಜಳಶೀಕರಂಗಳಿವಲ್ಲವಾ
ಪರೆದ ಮುತ್ತುಗಳೆಂಬ ಶಂಕೆಯನಾಗಿಕುಂ ಮಕರಾಕರಂ ॥ ೮೮೬

ತಾಮ್ರಪರ್ಣಿಯೊಳ್ ಶುಕ್ತಿಜಕ್ಕೆ ॥

ಜಿನರಾಜಶಿಶುಗೆ ಧರೆಯೊಳ್
ಜನಿಯಿಸಲಂತಾನರೇಂದ್ರ [2]ಪತ್ನಿಯೆ[2] ದೊರೆ ನೂ ।
ತನಶುಕ್ತಿಜಕ್ಕೆ ತಾಯ್ವನೆ
ಯೆನಿಸಲ್ ದೊರೆ ತಾಮ್ರಪರ್ಣಿ ತಾನೊಂದೆ ವಲಂ ॥ ೮೮೭

ಇದು ಜಾತಿ ॥

## ಸೂತ್ರಂ ೨೨೫

* ಹಿಮವದಗೇಂದ್ರಮೆ ಭೂರ್ಜ
ದ್ರುಮರಾಜಿಗೆ ಜನ್ಮಭೂಮಿ ಮಲಯಾದ್ರಿಯೆ ಬಂ ।
ಹಿಮವಚ್ಚಂದನಮಹಿರುಹ
ಸಮಿತಿಗೆ ಕುಲಗೇಹಮಿತರದೊಳ್ ಪುಟ್ಟುವೊಡಂ ॥ ೮೮೮

ಲಕ್ಷ್ಯಂ ॥

ಪ್ರಥಮಕ್ಕೆ ॥

[3]ಪೆರೆ[3] ಸುಲಿವ ಹಿಮವದವನೀ
ಧರಮೆಂಬುರಗಾಧಿಪತಿಯ ನಿರ್ಮೋಕದೊಳೇಂ ।
ದೊರೆಯಾದುವೊ ವಿ[4]ದ್ರುತ[4]ಜ
ರ್ಜರಭೂರ್ಜದ್ರುಮವನಂಗಳಿಂದಚಳಂಗಳ್ ॥ ೮೮೯

1 ಮು (ಓ). 2 ಸತಿಯೇ (ಅ). * ಕಾವ್ಯಮೀಮಾಂಸೆ, p. 81. 3 ಪೆರೆ (ಓ).
4 ದ್ರುಮ (ಅ).

ದ್ವಿತೀಯಕ್ಕೆ ||

ಇದು ಮಳಯಾಚಳಂ ಮಳಯಜಂ ಮಳಯಾನಿಳನೆಂದು ಪೆಂಪುವೆ
ತ್ತುದು ಸಿರಿ[1]ಕಂಡಮುಂ[1] [2]ಪದೆದು[2] ತೀಡುವ ಗಾಳಿಯುಮಿಲ್ಲ ಪುಟ್ಟಿ ಪೋ |
ಗದು ಪೊಸ ಸುಗ್ಗಿ ಮೂಗುವಡದಿಲ್ಲಿಯು ಕೋಗಿಲೆ ಬಂದ ಮಾವು ಬೀ
ಯದು ಕುಸುಮಾಸ್ತ್ರನಾಜ್ಞೆ ತವದೆಲ್ಲಿಯುಮಿಲ್ಲಿಯ ನಂದನಂಗಳೊಳ್ || ೮೯೦

ಇದು ದ್ರವ್ಯಂ ||

## ಸೂತ್ರಂ ೨೨೬

* ಸುರಭಿಸಮಯದೊಳೆ ಕೋಕಿಳ
ವಿ[3]ರುತಿ[3]ನಿಬಂಧನಮನಬ್ದಕಾಲದೊಳೆ ಮದೋ |
ದ್ಧುರಕೇಕಿಮಧುರಕೇಕಾ
ವಿರುತಿಯನಭಿಯುಕ್ತರಱಿದು ಪೇೞ್ವುದು ಕೃತಿಯೊಳ್ ||೮೯೧

ಲಕ್ಷ್ಯಂ ||

ಸುಗ್ಗಿಯ ಪುಗಿಲೊಳ್ ಮುಂಕೊಂ
ಡುಗ್ಗಿಯನು[4]ಜ್ಜ್ವಿಸಿ[4]ದಂತೆ ಮೋನಮನುಟಿದೇಂ |
ಬಗ್ಗಿಸಿದುವೊ ಕೋಗಿಲೆಗಳ್
ವೊಗ್ಗಪ್ಪ ವಿಯೋಗಿಯಂ [5]ಪುಗಲ್ ಪುಗಲೆನುತುಂ[5] || ೮೯೨

ಘನಸಮಯದೊಳಿರ್ದು ಶಿಳಾ
ಸನದೊಳ್ ಶೈಳೇಯಸುರಭಿತಳದೊಳ್ ಗೋವ |
ರ್ಧನ ಕಂದರದೊಳ್ ಶಿಖಿನ .
ರ್ತನಮಂ ನೀಂ ನೋಡ ಲಲಿತಕೇಕಾನ್ವಿತಮಂ || ೮೯೩

ಇದು ಕ್ರಿಯೆ ||

## ಸೂತ್ರಂ ೨೨೭

† ಅವಿಶೇಷದಿನುದ್ಗಮದೊಳ್
ಧವಳತೆ ಮಾಣಿಕ್ಯನಿಕರದೊಳ್ ಶೋಣತೆ ಮೇ |
ಘವಿತಾನದೊಳ್ ವಿನೀಳತೆ
ವಿವಿಕ್ತವರ್ಣವ್ಯವಸ್ಥೆಯಿಂದೊಂದಿರ್ಕುಂ || ೮೯೪

---

1 ಕಂಡಮಂ (ಓ). 2 ಪಡೆದು (ಅ). * ಕಾವ್ಯಮೀಮಾಂಸೆ, p. 82.
3 ರುತ (ಅ). 4 ಜ್ಜೃಂಭಿಸಿ (ಅ.ಓ), ಜ್ಜ್ವಿಸ (ಅ). 5 ಪುಗಿಲ್‌ಪುಗಿಲೆನುತುಂ (ಅ).
† ಕಾವ್ಯಮೀಮಾಂಸೆ, p. 84.

ಲಕ್ಷ್ಯಂ ॥

ಪುಷ್ಪ ಶೌಕ್ಲ್ಯಕ್ಕೆ ॥

ತಳಿರವೋಗಣಲರೋಳಿಗಳೋ ಪೊಸಮುತ್ತುಗಳ್
ತೊಳಪು[1]ವೋ ಪವಳ[1]ದಂಕುರದೊಳ್ ಪುದಿ[2]ದಿಂತು[2] ತೆ ।
ವ್ಮೊಳೆ ವಿಚಾರಿಸಿ ಜನಂ ಕರವೊಪ್ಪುವುದಾಯ್ತು ಪ
ಲ್ಗಳ ಮುಗುಳ್ನಗೆಯ ಬಾಯ ಬೆಡಂಗು ಲತಾಂಗಿಯಾ ॥ ೮೯೫

ಪಾಣಿಕ್ಯ ಶೋಣತ್ವಕ್ಕೆ ॥

ತುಂಗವಿಚಿತ್ರಕೂಟನಿವಹಂಗಳೊಳೊಪ್ಪುವ ರತ್ನದಂಶುಜಾ
ಳಂ[3]ಗಳ[3] ಕೆಂಪು ತಳ್ತು ನಿಲೆ [4]ಚೆಚ್ಚರದಿಂ[4] ಗಿರಿಗಳ್ಗಧೀಶ್ವರಂ ।
ತಾಂ ಗಡವೆಂದು ಮೇರುನಗದೊಳ್ ಘೋಣರ್ದೆಕ್ಕತುಳಕ್ಕೆ ವಂದು ನಾ
ರಂಗದ ತೊಂಗಲೇಱುಸಿದ ಮಾಡ್ಕೆಯೊಳಿರ್ದುದು ವಿಂಧ್ಯಪರ್ವತಂ ॥೮೯೬

ಮೇಘಕೃಷ್ಣತ್ವಕ್ಕೆ ॥

ಈ ಪುರುಷೋತ್ತಮನವನೀ
ಳೋಪಳ [5]ಸಚ್ಛಾಯ[5]ಕಾಯದೊಳ್ ಪೆಣೆದು ಘನ ।
ವ್ಯಾಪಿತಗಭೀರರುಚಿಗನು
ರೂಪಂ [6]ತಾನಕ್ಕೆ[6] ನಿನ್ನ ತನು ತನುಮಧ್ಯೇ ॥ ೮೯೭

ಇದು ಗುಣಂ ॥

ಇದು ಕವಿಸಮಯದೊಳ್ ನಿಯಮಾರ್ಥ ಪ್ರಕರಣಂ ತೃತೀಯಂ.

---

## [7]ಐಕ್ಯಪ್ರಕರಣಂ[7]

---

### ಸೂತ್ರಂ ೨೨೮

* ದಾನವದೈತ್ಯಾಸುರ ಸಂ
ತಾನಕ್ಕಂ ನಾಗಸರ್ಪಸಂಹತಿಗಳ್ಗಂ ।
ತಾನೇಕತ್ವಂ ಸಮಯಾ
ಧೀನಮದಕ್ಕುಂ ರಸಾತಳಪ್ರತಿಬದ್ಧಂ ॥ ೮೯೮

---

1 ವಾಪವಳ (ಅ). 2 ಧಂತು (ಅ). 3 ಗಳೊ (ಅ). 4 ಮಚ್ಚರದಿಂ, ಬೆಚ್ಚರದಿಂ (ಅ). 5 ಸುಚ್ಛಾರು (ಅ), ಸ್ವಚ್ಛಾಯ (ಓ). 6 ತಾನಕ್ಕು (ಓ). 7 ಇಲ್ಲಿಯೈಕ್ಯಪ್ರವೃತ್ತಿಯೆಂತೆನೆ (ಓ). * ಕಾವ್ಯಮೀಮಾಂಸೆ, p. 88.

ಲಕ್ಷ್ಯಂ ॥

ದನುಜರನಾಮುರಾರಿ ಗೆಲೆ ಕಾದುವ ಕಾಲದೊಳಾನದೇಕೆ [1]ಪು
ಟ್ಟೆನೊ[1] ಗಡಮಂದು ಪುಟ್ಟಿದೊಡೆ ದೈತ್ಯಕುಳಕ್ಕೆ ಕಳಂಕಮಾಗಲೀ ।
ವೆನೆ ದನುಜಾರಿಯೆಂಬ [2]ಬಿರುದಂ[2] ಸಲಲೀವೆನೆ ಕಾದಿ ಪೋಗಲೀ
ವೆನೆ ತಲೆದೋಱಲೀವೆನೆ ಮುಕುಂದನನೆಂ[3]ದೊಲೆವಂ[3] [4]ಖಳಾ[4]ಸುರಂ ॥

ಸರ್ಪನಾಗಂಗಳ್ಗೆ ॥

ಫಣಿರಾಜಂ ಬಾರಿಯಿಟ್ಟಟ್ಟಿದೊಡನುದಿನದಿಂ ಬರ್ಪ ಸರ್ಪಂಗಳಂ ಬ
ಲ್ಕಣಿ ತಾರ್ಕ್ಷ್ಯಂ ಭಕ್ಷಿಸುತ್ತುಂ ಮಳಯಗಿರಿಯೊಳಿರ್ಪಂ ಬಲಂ ಕೇಳಿರೇ ನೀ
ವೊಣರಿರ್ ಮತ್ತಮ್ಮ ಮಾತಂ ಗರುಡನಖಮುಖೋತ್ಪಾತದಿಂ ನಾಗಚೂಡಾ
ಮಣಿಗಳ್ ಬಂದಲ್ಲಿ ನಿಚ್ಚಂ ಸಿಡಿವುವಱವೆನೇಕಿಂತು ವಿಭ್ರಾಂತ[5]ರಪ್ಪಿರ್[5] ॥

## ಸೂತ್ರಂ ೨೨೯

* ಶಶಧರಲಕ್ಷ್ಮದೊಳಕ್ಕುಂ
ಶಶಹರಿಣಂಗಳ್ಗನನ್ಯಭಾವಂ ಸುಮನೋ ।
ವಿಶಿಖಧ್ವಜಾಂಕದೊಳ್ ನಿ
ರ್ವಿಶೇಷದಿಂ ಮತ್ಸ್ಯಮಕರಯುಗಳಕ್ಕೈಕ್ಯಂ ॥ ೬೧೦

ಲಕ್ಷ್ಯಂ ॥

ಶಶಹರಿಣಂಗಳ್ಗೆ ॥

ಉದಯಗಿರೀಂದ್ರರುಂದ್ರತಟದಿಂದೊಗೆ [6]ತಂದ[6] ಶಶಾಂಕನೆಂಬ [7]ಸೊಂ
ಕದ[7] ಮೃಗವೈರಿ ಕೂಡೆ ಪರಿದರ್ಬಿಸಿ ಪರ್ಬಿದ [8]ದುಸ್ತಮಸ್ತಮೋ[8] ।
ನ್ಮದಕರಿಯೂಥಮಂ ಪೆಳಱೆ [9]ಪೋಟೆ[9] ಪಿಸುಳ್ದ ತದುತ್ತಮಾಂಗದಿಂ
ಕೆದಱದ ಮೌಕ್ತಿಕಾವಳಿ[10]ವೊಲಾ[10]ದುವು[11]ಮೂಡಣ[11]ತಾರಕಾಳಿಗಳ್॥

ಕೊಳನಂ ಗಗನಂ ನೀರ್ವೂ
ಗಳನುಡುತತಿ ನೀರನಚ್ಚವೆಳ್ದಿಂಗಳ ತೆ ।
ಳ್ಪಿ[12]ಳಿಸೆ[12]ಹರಿಣಾಂಕಮಂಡಳ
ಮಿ[13]ಳಿಸಿ[13]ದುದಳಿ ಪಾಯ್ದ ಬಿಳಿಯ ತಾವರೆಯಲರಂ ॥ ೬೧೩

ಮತ್ಸ್ಯಮಕರಂಗಳ್ಗೆ ॥

ಚಿತ್ತಜನಿಕ್ಷುಚಾಪದಳವಂ ಮಿಗೆ ಕೊಂಕಿದ ಪುರ್ವು ಕಣ್ಣ ಬೆ
ಳ್ಪೆತ್ತಮನಂಗರಾಜನರಲಂಬಿನ ಲೀಲೆಯನಾಳೆ ಕಾಮನಾ ।

---

1 ಪುಟ್ಟೆನೆ (ಅ.ಓ). 2 ಪೆಸರಂ (ಅ). 3 ದಲೆವಂ (ಅ.ಓ). 4 ಬಳಾ (ಅ.ಓ). 5 ರಪ್ಪರ್ (ಅ). * ಕಾವ್ಯಮೀಮಾಂಸೆ, p. 86. 6 ದಂದೆ (ಅ). 7 ನಾಕದ (ಅ) 8 ದುಸ್ತವೋಸ್ತವೋ (ಅ). 9 ಪೇಟೆ (ಅ). 10 ಯೊಲಾ (ಓ). 11 ಮೂಡುವ (ಅ). 12 ಟಿಸೆ (ಇ). 13 8 ಟಿಸಿ (ಇ).

ರ್ದೆತ್ತಿದ ಮೀನಕೇತನಮನೊತ್ತರಿಸುತ್ತಿರೆ ಕೇಶಹಸ್ತಮು
ನ್ಮತ್ತಮರಾಳಗಾಮಿನಿ ಪೆಱಳ್ ರತಿಯಂ ಗೆಲೆವಂದು ನೋಡಿದಳ್ ॥ ೬೦೪

ಧನು ಕಾಮಂಗಿಕ್ಷುದಂಡಂ ಪಟಯಿಗೆ ಮಕರಂ ಬಾಣಸಂಘಾತ [1]ಮಚ್ಚಂ[1]
ನನೆಯಂಬೀಚಿಹ್ನಮಿಲ್ಲೆಂಬಿನಿತೆ ಮನಸಿಜಾಕಾರ[2]ಮಾಕಾರಮೇಂ[2] ಜಾ ।
ಣನೊ ಧಾತ್ರಂ ರೂಪನಿಷ್ಪಾದನವಿಧಿಯೊಳಿವಂ ಮುನ್ನಮೇಂ ನೋಂಪಿಯಂ ನೋಂ
ತನೊ ಪೇಜೆಂಬಂತು ಬಂದಂ ಸುಕವಿಜನಮನೋಮಾನಸೋತ್ತಂಸಹಂಸಂ॥ ೬೦೫

## ಸೂತ್ರಂ ೨೩೦

* ಕ್ಷಾರಕ್ಷೀರಾಂಬುಧಿಗಂ
ಕ್ಷೀರೋದಭವಾತ್ರಿಜೇಂದುಗಳ್ಗಂ[3]ಮುರಜಿ[3]
ನ್ನಾರಾಯಣರ್ಗಂ ಸಿರಿಗಂ
ಶ್ರೀರಾಮೆಗಮತನುಗಂ [4]ಭವಾರಿ[4]ಗಮೈಕ್ಯಂ ॥ ೬೦೬

ಕ್ಷಾರಕ್ಷೀರಾಂಬುಧಿಗಳ್ಗೆ ॥

ಇದಱೊಳ್ ಗರ್ಭಂಗಳಂ ಕಟ್ಟುವುವಿನಕಿರಣಶ್ರೇಣಿಗಳ್ ಪಂಚರತ್ನ
ಕ್ಕಿದು ದಲ್ ತಾನಾಕರಂ ನೀರ್ ತನಗೆ ಸವಿದೆಯಾದಗ್ನಿಯಂ ತಾಳ್ದಿ ಪೆರ್ಚಿರ್ ।
ರ್ದುದು ಚಂದ್ರಂ ಪುಟ್ಟಿದಂ ಮತ್ತಿದಱೊಳೆ ಸುರರುತ್ಪತ್ತಿ ಕೇಳಿಲ್ಲಿ[5]ಶಕ್ರಂ
ಗದಿರ್ದೆಯ್ತಂದದ್ರಿ[5]ಗಳ್ಗಾಶ್ರಯಮಿದಱೊಳದಭ್ರಾಭ್ರವೃಂದಂಗಳಿರ್ಕುಂ॥೬೦೭

ಮೇರು ಕಲಂಕೆಯುಂ ಕದಡಿತೋ ಬಡಬಾನಳನಪ್ಪೆ ಕಾಯ್ದುದೋ
ಮಾರುತಿ ಕಟ್ಟೆ ಮೇಣ್ ಪಱಿದುದೋ ಗಿರಿಗಳ್ ಬರೆ ವಜ್ರಿಗಳ್ಕಿತೋ ।
ಸಾರಸಮಸ್ತವಸ್ತುಗಳನಾರ್ಕೊಳೆ ತಪ್ಪುದೊ ಮತ್ತಮಂತೆ ಗಂ
ಭೀರತೆ ಸಂದುದೆಂದು ಹರಿ ಮೆಚ್ಚಿ ಕರಂ ಪೊಗಟ್ಟಂ ಸಮುದ್ರಮಂ ॥ ೬೦೮

[6] ಕ್ಷೀರೋದಭವಾತ್ರಿಜೇಂದುಗಳ್ಗೆ [6] ॥

† ಅತ್ರಿಯ ಪಿರಿಯ ಮಗಂ ಧ್ರುವ
ನತ್ರಯ ಸಂಸ್ತುತ್ಯ ಕೀರ್ತಿ ಸೋಮಂ ಸಕಲ ।
ಕ್ಷತ್ರಕುಲಪೂಜ್ಯನಮಲಚ
ರಿತ್ರಂ ಪ್ರೋದ್ದಾಮಸೋಮವಂಶಲಲಾಮಂ ॥ ೬೦೯

---

1 ದುಚ್ಚಂ (ಅ). 2 ಮಾಗಿರ್ದನೇಂ (ಅ.ಓ). * ಕಾವ್ಯಮೀಮಾಂಸೆ, p. 81–88. 3 ಮುರರಿಪು, ಮುರಾರಿ (ಅ). 4 ಶಂಬರಾರಿ (ಅ). 5 ಸಂಬಕ್ಕಾದಿರ್ದೆಟ್ಟಂದಗ್ನಿ (ಅ), ಸಂಬಕ್ಕಗಿದೆಟ್ಟಂದಗ್ನಿ (ಓ). 6 ಅತ್ರಿನೇತ್ರಸಮುತ್ಪನ್ನೇಂದುಗಳ್ಗೆ (ಓ.) † ಕಾವ್ಯಮೀಮಾಂಸೆ, p. 87.

ಪಾರಾವಾರಂ ತುಹಿನಕಿರಣಂ ಕುಂದೆ ಕುಂದಿತ್ತು ಮತ್ತಂ
ತೋರೊಂದೋರೊಂದಮೃತಕಳೆಯುಂ ಪೆರ್ಚೆ ಪೆರ್ಚಲ್ ತಗುಳ್ದ |
ತ್ತಾರುಂ ಮಕ್ಕಳ್ಗೆ ಱುಗುವನಿತಂ ಬಂಧುಗಳ್ಗೋಯರೊಳ್ ಪೊ
ಕ್ಕಾರಯ್ಯಾಗಳ್ ತನಯಜನಿತಸ್ನೇಹಮಾರ್ಗಂ ಬಲಸ್ಥಂ || ೯೧೦

ನಾರಾಯಣಮುರಾರಿಗಳ್ಗೆ ||

ಉರದೊಳ್ ಕೌಸ್ತುಭರತ್ನಮುಂ ಕಮಳೆಯುಂ ಶ್ರೀವತ್ಸಮುಂ ತೋಳ್ಗಳೊಳ್
ಕರ[1]ವಾಳುಂಗದೆ[1] ಚಕ್ರಮಲ್ಲಿಯೆ ಮಲಂಗಿರ್ಪಳ್ ಜಯಶ್ರೀ ನಿಜೋ |
ದರದೊಳ್ ನೀರಜಗರ್ಭನುಂ ತ್ರಿಜಗಮುಂ ಪೊಕ್ಕಿರ್ಪುವೆಂದಂದಹೀ
ಶ್ವರತಲ್ಪಂ ಯದುವಂಶನಲ್ಲದೆ ಪೆಱಂ ಪೆಂಪಿಂಗೆ [2]ಮುಯ್ಯಾಂ[2]ಪನೇ || ೯೧೧

ಶ್ರೀರಾಮಾವಿಭೂತಿಗಳ್ಗೆ ||

ಅಮೃತಪಯೋಧಿಮಂಥನದೆ ಪುಟ್ಟಿದ ಪದ್ಮವನಾಂತರಾಳದೊಳ್
ರಮಿಯಿಪ ಪದ್ಮನಾಭನುರದೊಳ್ ನೆಲಸಿರ್ಪ ಮಹಾನು[3]ಭಾವೆಯೆಂ[3] |
ಕಮಳೆಯೆನಿನ್ನೆಗಂ ಕುರುಮಹೀಪತಿಯೊಳ್ ನೆಲೆಸಿರ್ದನೀಗಳು
ತ್ತಮಪುರುಷೋತ್ತಮಂ [4]ಬೆಸಸೆ[4] ಪಾಂಡವರೊಳ್ [5]ನೆಲಸಲ್ಕೆ[5] ಪೋದಪೆಂ||

ಮನೋಜ[6]ಶಂಕರಾರಿಗಳ್ಗೆ[6] ||

ಸುರಭಿ[7]ಶರಂ[7]ಗಳಂ ನಯನದೊಳ್ ಕುಡುಪುರ್ವಿನೊಳಿಕ್ಷುಚಾಪಮಂ
ಪರಿಚಿತಮೀನಕೇತನಮನಾವಗವೊಪ್ಪುವ ಕೇಶಹಸ್ತದೊಳ್ |
ನಿರವಿಸಿ ಬಯ್ತು ಮೆಯ್ಗೆರೆದು ಶೂಲಧರಂ[8]ಗಗಿದಿರ್ಪ[8]ನಲ್ಲಿ ಪೆಂ
ಡಿರ ಮಱೆಯೊಳ್ ಮನೋಜನನೆ ಚೆಲ್ವೆಸೆವರ್ ಕಡುಗಾಡಿಕಾರ್ತಿಯರ್ ||

ಇದು ದ್ರವ್ಯಂ ||

## ಸೂತ್ರಂ ೨೩೧

ಮುಕುಳನನಿಮೀಳನಂಗಳ್
ವಿಕಾಸಹಾಸಪ್ರಬೋಧನೋನ್ಮೇಷಂಗಳ್ |
ಪ್ರಕಟಿಸುಗುಮೈಕ್ಯಮಂ ನಿ
ರ್ವಿಕಲ್ಪದಿಂ ಗೌಣಮುಖ್ಯವೃತ್ತಿಕೃತಂಗಳ್ || ೯೧೪

ಲಕ್ಷ್ಯಂ ||

ಮುಕುಳನನಿಮೀಳನಂಗಳ್ಗೆ ||

ಮುಕುಳಿತ ವಿಳೋಚನಂ ಕಂ
ಟಕಿತಾಂಗಂ ಸ್ವೇದಬಿಂದುದಂತುರಿತ ಮುಖಂ |

---

1 ವಾಳಬಿರ್ (ಇ). 2 ಮುಯ್ಯಾ-. 3 ಭಾವೆಯಾಂ (ಅ). 4 ಬೆರಸಿ (ಅ.ಓ). 5 ನೆರೆಯಲ್ಕೆ (ಅ.ಓ). 6 ಶಂಬರಾದಿಗಳ್ಗೆ (ಓ). 7 ಶಯಂ (ಅ.ಓ). 8 ಗಿದಿರ್ಪರ್ (ಅ).

ಪ್ರಕಟಶ್ವಸಿತೋತ್ಕಂಪಂ
ನಿಕಾಮಕಮನೀಯಮಾದುದಿಂತು ರತಾಂತಂ ॥ ೯೧೫

ವಿನಿಮಿಾಳನ್ನೀಳಾಂಬುಜ
ವನಮಿಾಷದ್ವಿಕಸದರುಣಸರಸಿರುಹವನಂ ।
ದಿನಮುಖಮಳಿಸಂತತಿಗೇಂ
ಜನಿಯಿಸಿದುದೊ ಭಿನ್ನರುಚಿಗಳಂ ಪರಿಮಳದೊಳ್ ॥ ೯೧೬

ವಿಕಾಸಹ ಸಂಗಳ್ಗೆ ॥

ಪೊಸವಿಸಿಲೊಳ್ ಮುಗುಳ್ಗಳ್ ಸಡಿಲ್ದುಸಿರ್ವ್ವಂತೆಸ
ಟ್ಮಸಗಿ ಮುಗುಳ್ನಗೆ ನಕ್ಕು ತೋಱೆ ಮದಾಳಿಗಳ್ ।
ನುಸುಳೆ ತೊವರ್ತೆರೆ ಕಂಪಲರ್ದುವನಂಬುಜ
ಪ್ರಸರಮನಾಳೆ ಬೆಳಪ್ಪನೀಗೆ ವರಂಗಳಂ ॥ ೯೧೭

ಅದಲ್ಲದೆಯುಂ ॥

ನಗೆಯಂ ಬಲ್ಮುಗುಳ್ಗಳ್ಗೆ ಕಂಪನಳಿಗಳ್ಗಾನಂದಮಂ ಕೋಕಿಳಾ
ಳಿಗೆ ಸೊರ್ಕಂ ಗಿಳಿಗಳ್ಗೆ ಬೀರಸಿರಿಯಂ ಕಾವಂಗೆ ಬೆರ್ಚಂ ವಿಯೋ ।
ಗಿಗೆ ಪೆರ್ಚಂ ಪ್ರಿಯರ್ಗೆಯ್ದೆ ಮಾಡಿ ವಿ[1]ದಳ[1]ತ್ಪುಷ್ಪಾಳಿ ತೆಂಗಾಳಿ ತೀ
ಡುಗುಮಲ್ಲಾಡೆ ಸಮಸ್ತದಂಪತಿ [2]ರತಿಕ್ರೀಡಾಪರಿಶ್ರಾಂತಿಗಳ್[2] ॥ ೯೧೮

ಅಲರ್ದ ಪೊಗಂ ಕಿಱಿದಾದುದು
ನೆಲಸಿದುದಟಲೆರ್ದೆಯೊಳಪ್ಪುಕಣಸಿರ್ದುವು ಚಾ ।
ಪಲನಯನಕುವಲಯಂ ಸು
ಯ್ಯಲರಾದಂ ಬಿಸಿಯವಾದುವಾಸತಿಗಾಗಳ್ ॥ ೯೧೯

ತೃಷ್ಣಾಭಿಲಾಷಂಗಳ್ಗೆ ॥

[3]ದೂರಾವತೀರ್ಣ[3] [4]ಪಂಪಾ[4]
ವಾರಿಯ[5]ನಿದನಱಿತು[5] [6]ಕಱುತು[6] ತಳವೆಯ್ದುವಿನಂ ।
ನೀರಡಸಿ [7]ನೀರಜಾನನೆ[7]
ಪೀರಲ್ ಬಗೆದಪ್ಪುವೆನ್ನ ಕಣ್ಣುಂ ಮನಮುಂ ॥ ೯೨೦

ಇದು ಕ್ರಿಯೆ ॥

## ಸೂತ್ರಂ ೨೩೨

* ಹರಿತಾಸಿತನೀಳಶ್ಯಾ
ಮರೋಚಿಗಂ ಪೀತರಕ್ತವರ್ಣಂಗಳ್ಗಂ ।

1 ಗಳ (ಅ). 2 ಕುಳಕ್ಕಂಕಾಂತಿಗಳ್ ಶಾಂತಿಗಳ್ (ಅ). 3 ದೂರವತೀರಂ (ಅ). 4 ಗಂಗಾ (ಅ). 5 ನೀರಱಿತು, ನಿದನಱಿತು (ಅ) 6 ಕಱುತು, ಕುಱುತು (ಅ). 7 ನೀರಜಾಕ್ಷಿಯ, ನೀರಜಾಕ್ಷಿ. * ಕಾವ್ಯಮಿಾಮಾಂಸೆ ಪುಟ 84-85.

ದೊರೆಕೊಳ್ಗುಂ ಗೌರಶ್ವೇ
ತರುಚಿಗಮಿತರೇತರಾಶ್ರಯಂ [1]ವರ್ಣೈಕ್ಯಂ[1] ॥ ೯೨೧

ಲಕ್ಷ್ಯಂ ॥

ಕೃಷ್ಣಹರಿತಂಗಳ್ಗೆ ॥

* ಮರಕತತ್ವಿಷಮಾ ಯಮುನಾಜಳಂ
ಸ್ಫುರದುರುಸ್ಫಟಿಕೋಪಳಕಾಂತಿಯೊಳ್ ।
[2]ಬೆರಸಿ[2] ಗಂಗೆಯ ವಾರಿಯೊಳೊಪ್ಪುಗುಂ
ಹರಿಹರದ್ವಯಸಂಗಮದಂದದಿಂ ॥ ೯೨೨

ನೀಲಶ್ಯಾಮಂಗಳ್ಗೆ ॥

ಪದಧೂಳಿಕ್ಷೋಭದಿಂ ದಿಗ್ಯುವತಿವದನಮಂ ಶ್ಯಾಮಳಂ ಮಾಡಿ ಮಾಣ್ದಿ
ರ್ದುದೆ ಕೋಪೋದ್ಭಿನ್ನಗಂಡಸ್ಥಳಕರಟಪುಟಾವ್ಯೂಹನೀಲಾಂಬುದಾಳೀ।
[3]ಪದಿನತ್ಯುಗ್ರಾ[3]ಸ್ತ್ರಶಸ್ತ್ರಪ್ರಕರಕಿರಣಸಂಘಾತತೀವ್ರಾತಪೋದ್ಯೋ
ತದಿನರ್ಧಶ್ಯಾಮಳಂ ಮಾಡಿದುದು [4]ದಿವ[4]ಮುಮಂ ಕೂಡೆ ರಾಜೇಂದ್ರಸೈನ್ಯಂ॥

ಪೀತರಕ್ತಂಗಳ್ಗೆ ॥

† ಪ್ರವಿರಾಜತ್ಕಳಧೌತಪಿಂಗರುಚಿಮ[5]ದ್ದಂಷ್ಟ್ರಾಗ್ರದಿಂ [5]ದಿಕ್ಕಿ[6] ದಾ
ನವರಂ[6] ಧಾತ್ರಿಗೆ ರಾಗಮಾಗೆ ನೆಗಪ್ದಾದಿಕ್ರೋಡನಾಕಾರದಿಂ ।
ತವೆ ಬೆಂಕೊಂಡು ತಮಸ್ತಮಪ್ರಕರಮಂ ಬಾಳಪ್ರವಾಳಾಂಕುರ
ಚ್ಛವಿಯಿಂ ಚಂದ್ರನುದಂಶುಲೇಖೆಯಿನದೊಂ[7]ದಾನಂದಮಂ ಮಾಡಿದಂ[7] ॥

ಅಂತುಮಲ್ಲದೆಯುಂ ॥

ವಿದಳತ್ಕಿಂಶುಕಕಿಂಕಿರಾತಸುಮನಃಕಾಶ್ಮೀರಸಂಧ್ಯೋದ್ಗತಾಂ
ಬುದ[8]ಪೀತಾಂಬರ[8]ನಿಂದ್ರನೀಲ[9]ವಿಲಸ[9]ನ್ನೀಲಾತಸೀನೀಲನೀ ।
ರದನೀಲಾಂಬುಜವರ್ಣನರ್ಣವಯುಶಂ ಕೃಷ್ಣಂ ಧರಾದೇವಿಗೊ
ಪ್ಪಿದನಂತಜ್ಜ್ವಲದೌರ್ವವಹ್ನಿಲವಣಾಂಭೋರಾಶಿಲೀಲಾವಹಂ ॥ ೯೨೪

ಗೌರಶ್ವೇತಂಗಳ್ಗೆ ॥

ಹಿಮವದ್ಗಿರಿ[10]ಕಟಕ[10]ದಿನೊಗೆ
ದಮರಸರಿತ್ಸ್ರೋತಮೆಂಬ ಮಾತಂ ಪಡೆದೇಂ ।
ಹಿಮಗೌರಹಾರಮೆಸುದುದೊ
ಹಿಮಶೈಲ[11]ಶಿಖಾವಿಶಾಲ[11]ವಕ್ಷಃಸ್ಥಲದೊಳ್ ॥ ೯೨೬

---

1 ತಾನಕ್ಕುಂ (ಅ). * ಕಾವ್ಯಮೀಮಾಂಸೆ 85. 2 ಪೊರಸಿ. 3 ಪದೆಪ್ರತ್ಯಗ್ರಾ (ಅ). 4 ದಿನ (ಅ). † ಕಾವ್ಯಮೀಮಾಂಸೆ—ಪು. 85. 5 ದ್ದಾಷ್ಟ್ರಾಂಗದಿಂ (ಅ). 6 ದಾನವನಂ (ಅ). 7 ದಾಕಾರಮಂತಾಳ್ದಿದಂ. 8 ನೀಲಾಂಬರ (ಅ). 9 ವಿಕಸ (ಅ). 10 ನಿಕಟ (ಅ). 11 ಶಿಖಾವಿಳಾಸ, ಶಿರೋವಿಳಾಸ (ಅ).

## ಸೂತ್ರಂ ೨೩೩

* ನಯನಾದಿವಿವಿಧವರ್ಣಾ
ತ್ರಯಂಗಳೊಳ್ ಬೇಱುವೇಱು ಬೇಱೊಂದನೆ ನಿ ।
ರ್ಣಯಮಪ್ಪ ವರ್ಣಮಂ ಸಮು
ದಯದಿಂದಂ ಪೇೞ್ಗೆ ಮೇಣ್ ಯಥಾಸಂಭವಮಂ ॥ ೬೨೭

ಲಕ್ಷ್ಯಂ ॥

ಎವೆಯಿಕ್ಕದೆ ಪದಪಿಂ ನೋ
ಡುವ ಪುರಲಲನೆಯರ ಬಿಳಿಯ ಕಣ್ಗಳ ಬೆಳಗಿಂ ।
ಧವಳಿಸಿದಂತೆವೊಲಾದುವು
ಗವಾಕ್ಷಜಾಳಂಗಳಮರತನಯಂಗಾಗಳ್ ॥ ೬೨೮

ಒದವಿದ ಬೇಟದತ್ತಳಗದೊಳ್ ಮುಳಿಸಂ ಪುರುಡುಂಟುಮಾಡೆ ಜ
ರ್ವಿದ ಕಡೆಗಣ್ಣ ಜರ್ಪುಗಳೊ ವೋದಿದ ನೆಯ್ದಿಲ ನೀಳ್ದಮಾಲೆಯಿಂ ।
ದುದಿರ್ದ ಮದಂಗಳೊಳ್ ತೊಡರ್ದು ತೋರ್ಪ ದಳಂಗಳೊ ಪೇೞಿಮಾವುದೆಂ
ಬುದನೆನೆ ಕಾದಿ ವೋದಿದವಿನಾಣಮದಿಲ್ಲದದೆಲ್ಲಿ ನಲ್ಲಳಾ ॥ ೬೨೯

ಮಿಶ್ರವರ್ಣಂಗಳ್ಗೆ ॥

ವದನಾಬ್ಜಾಸವಗಂಧಲಂಪಟರಟದ್ಭೃಂಗಂಗಳಂ ಸೋಲೆಯಿಸಿ
ತ್ತಿದ ನೀಳೋತ್ಪಳಮಾಳೆಯಂ ದ್ವಿಗುಣಿಸಲ್ಕಾರ್ತತ್ತು ಕರ್ಣಾಂತಗಾ ।
ಮಿದಳನ್ನೀಳಸರೋಜರೋಚಿ ಕುಮುದಜ್ಯೋತ್ಸ್ನಾವದಾತಪ್ರಥಂ
ಮದನೋತ್ತೇಜಿತಬಾಣವಿಭ್ರಮಮಪಾಂಗಾಳೋಕನಂ ನಲ್ಲಳಾ ॥ ೬೩೦

ಗಣಿಕೆಯರ ವಿಳಾಸಾಗಾರದೊಳ್ ಜಾಳಮಾರ್ಗ
ಪ್ರಣಯಿನಿಯರಪಾಂಗಶ್ರೇಣಿಗಳ್ ಮೂಱುಬಣ್ಣಂ ।
ಪೆಣೆದೊದವೆ ಗವಾಕ್ಷಸ್ಥೇಂದುಕಾಂತೇಂದ್ರನೀಲಾ
ರುಣಮಣಿಕಿರಣಂಗಳ್ ಪೊಣ್ಮುವಂತಾದುವಾಗಳ್ ॥ ೬೩೧

ಇದು ಗುಣಂ ॥

## ಸೂತ್ರಂ ೨೩೪

ಅನುಗತಮಪ್ಪಂತಿರೆ ಚೇ
ತನಧರ್ಮಂಗಳನಚೇತನಾರ್ಥಂಗಳೊಳಂ ।

* ಕಾವ್ಯಮೀಮಾಂಸೆ—ಪು. 85.

ಸ್ತನನಯನಾದಿಯೊಳಂ ದ್ವಿ
ತ್ವನಿಷ್ಟಮಂ ಜಾತಿಯಂ ವಿವರ್ಣಿಪರರೆಬರ್ ‖ ೯೩೨

ಲಕ್ಷ್ಯಂ ‖
ಪೂರ್ವಾರ್ಧಕ್ಕೆ ‖

ತೋಳ ಘಟ್ಟಣೆಗುಚ್ಚಳಿಸುತ್ತುಂ ಸೂಸುವ ಶೀಕರವಾರಿ ಮು
ಕ್ತಾಳಿಯಿಂದಭಿಷೇಕಮೆ ಗೆಯ್ವಂತೊಪ್ಪೆ ಕಳಿಂದಜೆಯಂ ಮನೋ ।
ಲೀಳೆಯಿಂ ಪುಗೆ ತನ್ನದಿ ಕೃಷ್ಣಂಗಾಹಿಸಿದಂತಿರೆ ಲೋಲಕ
ಲ್ಲೋಳಕೋಮಲಹಸ್ತದೆ ಪೊಯ್ವಳ್ ಮುಂದಲೆಯಂ ಕಮಳಾಕ್ಷನಾ ‖ ೯೩೩

ಉತ್ತರಾರ್ಧಕ್ಕೆ ‖

ಕಡೆದಪ್ಪೊ[1]ಲಿರ್ಪ[1] ಪೆರ್ಮೊಲೆ ತೊಡಳ್ದುಡಿ ಮೆಲ್ನಡೆ ಚೆಲ್ವನಪ್ಪ ತೆ
ಳ್ನಡು ನಳಿತೋಳ್ ಪೊದಳ್ದಧರವೊತ್ತದೆಯುಂ ನಿಱಿಗೊಂಡ ಚುಂಚು ಸೋ ।
ರ್ಮುಡಿ ಕಡುನುಣ್ಪುವೆತ್ತ ತೊಡೆ ತುಂಬಿದ ಪೀನನಿತಂಬಬಿಂಬವೊ
ಕ್ಕುಡಿತೆಯೆನಿಪ್ಪ ಕಣ್ ಕರವೆ ರಂಜಿಸೆ ಬಂದರಿಳೇಶಕಾಂತೆಯರ್ ‖ ೯೩೪

## ಸೂತ್ರಂ ೨೩೫

ಪದದೊಳ್ ಮಾಟ್ಪಂತಿರೆ ಮಾ
ಟ್ಪುದು ನಿತ್ಯಂ ಪಾದದೆಡೆಗಳೊಳ್ ಸಂಹಿತೆಯಂ ।
ತುದಿಯೊಳಮರ್ಧದೊಳಂ [2]ಮಾ[2]
ಡದಿರ್ಕೆ ಮೇಣ್ ಮಾಣ್ಕೆ ತಾನದೆಲ್ಲಿ ಯಥೇಷ್ಟಂ ‖ ೯೩೫

ಲಕ್ಷ್ಯಂ ‖

ಮೃಡನುಡುರಾಜಪನ್ನಗವಿರಾಜಿ ಜಟಾಮಕುಟಂ ಕಪರ್ದಿ ನೂ
ರ್ಮಡಿ ಧವಳಂ ಸುರಾಸುರಕದಂಬಕಸೇವ್ಯಪದಾಂಬುಜದ್ವಯಂ ।
ಅಡರೆ ಮೃಡಾನಿಗನ್ಯಕುಳಶೈಳಕುಳಂಗಳ ನಾಡೆ ರಯ್ಯಮ
ಪ್ಪೆಡೆಗಳನೆಲ್ಲಮಂ ನೆಱೆಯೆ ತೋರ್ಪುದು ಬೇಳ್ಕೆಯೆ ಬಂದನೀಶ್ವರಂ ‖ ೯೩೬

[3]ಸೋತಂ[3] ಪುರೋಹಿತಂ ಬೆರ
ಸಾತತತಿಮಿರಪ್ರಭೇದನೋಪಾಯಮಿದೆಂ ।
ದಾತಮಮಂ ಕಿಡಿಸಲ್ ನಂ
ಜಾತನಯಂ [4]ಬಗೆದು ತದ್ಗುಹಾಭಿತ್ತಿ[4]ಗಳೊಳ್ ‖ ೯೩೬

---

1 ಲಪ್ಪ (ಅ). 2 ಕೂ (ಅ). 3 ಆತಂ (ಅ). 4 ಬರೆದುತಂದುಗ್ಯಹಭಿತ್ತಿ, ಬರೆದುತದ್ಗುಹಾಭಿತ್ತಿ (ಅ).

ಇಲ್ಲಿಯೆ ಪೇಳೆಂದು ಮಹೀ
ವಲ್ಲಭದೂತಂಗೆ [1]ನುಡಿಯೆ[1] ದಶನಾಂಶು [2]ಗಳಂ[2] ।
ಮೆಲ್ಲನೆ [3]ದಂತ[3]ಚ್ಛದಮೃದು
ಪಲ್ಲವ[4]ದೊಳ್ ನಿಱಿಸಿ ಮರಳೆ[4] ದೂತಂ ನುಡಿದಂ ॥ ೯೩೮

ಅರಸುಗಳೆಲ್ಲಂ ಬಾಯ್ಕೇ
ಳ್ವರೆಂದುಮಾಶಾಂತರಂಗಳಳ್ಕಿದು [5]ವೆಂದುಂ[5] ।
ಧರಣೀತಳಂ ಬಣ್ಣಿಸ ಕೇ
ಳ್ವ ರಾಗಿಸುತ್ತಿರ್ಪಮಿನ್ನುವೇಂ ತೊದಳುಂಟೇ ॥ ೯೩೯

ಎರಡಱೊಳಂ ಚಂದ್ರಾದಿ
ತ್ಯರನಾಗಳ್ ಬರೆದು ಕಾಕಿಣೀರತ್ನದೊಳಂ ।
ಸ್ಫುರಿತಮಣಿರತ್ನದೊಳಮಂ
ತರಿಸುತ್ತುಂ ಯೋಜನಕ್ಕಮಂತೊಂದೊಂದಂ ॥ ೯೪೦

## ಸೂತ್ರಂ ೨೩೬

ಸಂಬಂಧದ ಸಂಬಂಧದೊ
ಳಂ ಬಹುಳಂ ಷಷ್ಠಿಯಕ್ಕುವೊಂದಿರೆ ನೆಗಬ್ದುಂ ।
ಬಿಂಬಾಧರಾದಿಶಬ್ದವೊ
ಡಂಬಟ್ಟಿರೆ ಮಧ್ಯಪದವಿ[6]ಲೋಪಿ[6] ಸಮಾಸಂ ॥ ೯೪೧

ಲಕ್ಷ್ಯಂ ॥

ಕಮಳದ ಕೋಮಳಕಂದಾ
ಗ್ರಿಮಾಂಕುರಾಸ್ವಾದ[7]ಮಾದವೊದವಿಸೆ[7] ಮುದಮಂ ।
ಕಮಳಾಕರದೊಳೆ ಹಂಸಂ
ರಮಿಯಿಸುಗುಂ ಪದ್ಮಿನೀರಜೋರುಣಿತಾಂಗಂ ॥ ೯೪೨

ಬಿಂಬಾಧರಕಾಂತಿಪ್ರತಿ
ಬಿಂಬಂ ಸುಲಿವಲ್ಲೊ[8]ಳೆಸೆಯೆ[8] ಪಲ್ ಸುಲಿಯುವೆ ಗೆ ।
ತ್ತೇಂ ಬಾಲೆ ಮುಗ್ಧೆಯೋ ಮ
ತ್ತಂ ಬಿಡದಡಿಗಡಿಗೆ ನೋಡುವಳ್ ಕನ್ನಡಿಯಂ ॥ ೯೪೩

---

1 ನುಡಿದು (ಅ). 2 ಗಳಂ (ಅ). 3 ದಶನ (ಅ). 4 ದೊಳೆಮಾಱಿಸಿ ಮಾಣೆ (ಅ). 5 ವೆಂಟುಂ (ಅ). * ಈ ಪದ್ಯವು ಒಂದು ಪ್ರತಿಯಲ್ಲಿ ಮಾತ್ರ ಇದೆ. 9 ಲೋಪ (ಅ). 7 ಮಾಗಳೊದವಿಸೆ (ಅ). 8 ಳೆಯ್ದೆ (ಅ).

## ಸೂತ್ರಂ ೨೩೭

ಭಂಗುರಭಿದುರಚ್ಛಿದುರಪ
ದಂಗಳ್ ಸಲೆ ಕರ್ಮ[1]ಕರ್ತೃವೊಳ್ ಕರ್ತೃವೊಳಂ[1] ॥
ಸಂಗತಿವೆತ್ತಿರ್ಕುಂ ಕವಿ
ಪುಂಗವಸಮಯವ್ಯವಸ್ಥೆಯಿಂದಂ ಕೃತಿಯೊಳ್ ॥ ೯೪೪

ಲಕ್ಷ್ಯಂ ॥

ಭಂಗುರಕೇಶಿ ನಲ್ಲನ ತಳಂಗಳೊಳೊಯ್ಯನೆ ಮೆಯ್ಯನಿಕ್ಕಿ [2]ಮಿಂ
ಚಿಂಗೆಣೆ[2]ಯಾಗಿ ತಳ್ತು ಕೊರಲಂ ಬಿಗಿಯಪ್ಪಿ ಕಟಿಪ್ರದೇಶಮಂ ।
ಪಿಂಗದಿಱುಂಕಿ ತನ್ನೆರಡುಮೂರು[3]ಗಳಿಂ[3] ಪಡೆದಳ್ [4]ನಿಜಾಂಗಸಂ
ಸಂಗದಿ[4]ನಾಲತಾಂಗಿ ತನಗಂ [5]ಖಚರಂಗಮನಂಗರಾಗಮಂ[5] ॥ ೯೪೫

[6]ಸಂಗತನಿಜಹಸ್ತಕ[6]ನಿ
ಷ್ಠಾಂಗುಲಿಧೃತಮಮಂ ಪ್ರಿಯಾಮನಃಖೇದಲತಾ ।
ಭಂಗುರಮಂ ರವಿಮಂಡಳ
ದುಂಗುರಮಂ ರಘುಜನಿತ್ತನಣುವನ ಕೆಯ್ಯೊಳ್ ॥ ೯೪೬

ಪ್ರಾಲೇಯಾದ್ರಿನವಪ್ರಸೂನಭಿದುರಂ ಗಂಗಾಸರಿಲ್ಲೋಲಕ
ಲ್ಲೋಲಾಂಭೋ[7]ಲವ[7]ಶೀಕರಂ ಚಿರರತಿಶ್ರಾಂತಾಮರಸ್ತ್ರೀಕುಚ ।
ವ್ಯಾಲಿಪ್ತಾಗರುಕುಂಕುಮದ್ರವಹರಂ [8]ಮಾದ್ಯತ್ಪಿಕಾಲಾಪ[8]ವಾ
ಚಾಲಂ ಮಾರುತನೊಯ್ಯನೂದಿ ಕಳೆದತ್ತಾದಂಪತಿಶ್ರಾಂತಿಯಂ ॥ ೯೪೭

ಅದಱನೀತನನಾತನೆ ಕೊಂದು ವಿ
ಚ್ಛಿದುರಸಂಗರನಕ್ಕಮ ಕೊಲ್ಲೆನೆಂ
[9]ದೊದಱ[9] ಗಾಂಡಿವಿ ಖಂಡಿಸಿದಂ ಮಹಾ
ಸ್ತ್ರದಿನರಾತಿಯ ಕೆಯ್ದುಗಳೆಲ್ಲಮಂ ॥ ೯೪೮

ಮತ್ತಮುಳಿದೆಡೆಗಂ ನೋಡಿಕೊಳ್ವುದು ॥

## ಸೂತ್ರಂ ೨೩೮

ಗದ್ಯಮಯಂ ಪದ್ಯಮಯಂ
[10]ತದ್ಯಮಳ[10]ವಿಮಿಶ್ರಮೆಂದು ಕೃತಿಮೂಱುತೆಱಂ ।

---

1 ಕರ್ತುವುಂ ಕರ್ತೃವೊಳಂ, ಕರ್ತೃವೇ ಕಾರ್ಥದೊಳಂ. 2 ಮಿಾನಿಂಗೆಣೆ (ಅ). 3 ಗಳಂ (ಅ). 4 ನಿಜೇಶನುತ್ಸಂಗದಿ (ಅ). 5 ಸುಖರಂಗಮನಂಗರಾಗದಿಂ (ಅ). 6 ಸಂಗತನಿಜಮಸ್ತಕ (ಅ). 7 ರವ (ಅ). 8 ಮಾಂದತ್ಪಿಕಾಲೋಕ (ಅ). 9 ದೊದಱ (ಅ). 10 ತದ್ಯಮಕ (ಅ).

ಗದ್ಯದೊಳೆ ಸಮೆದು[1]ಮಂತವು[1]
ಹೃದ್ಯವಚಃಪ್ರೌಢಿ[2]ಗಳ್[2] ಕಥಾಖ್ಯಾಯಿಕೆಯೊಳ್ ॥ ೯೪೯

## ಸೂತ್ರಂ ೨೩೯

ದೊರೆವೆತ್ತ [3]ಪದ್ಯದಿಂದಂ[3]
ವಿರಚಿಸಿದುದು ಸರ್ಗಬಂಧಮಕ್ಕುಂ ಕಾವ್ಯಂ ।
ಬೆರಸಿ ಬರೆ ಗದ್ಯಪದ್ಯಮ
ವೆರಡುಂ ಕೃತಿ ಚಂಪುವೆಂಬ ಪೆಸರಂ ಪಡೆಗುಂ ॥ ೯೫೦

## ಸೂತ್ರಂ ೨೪೦

ಇಡುಕುಂಗಬ್ಬಂ ಮುಕ್ತಕ
ಮೊಡಂಬಡಲ್ ನೆಗಟೆ ಪಲವುಮೇಕಕ್ರಿಯೆಯೊಳ್ ।
ಪಡೆಗುಂ ಕುಳಕಾಖ್ಯೆಯನೆಡೆ
ಮಡಗದನೇಕಾರ್ಥವಸ್ತುಕಥನಂ ಕೋಶಂ ॥ ೯೫೧

## ಸೂತ್ರಂ ೨೪೧

ಸಂದಿಸಿರೆ ಕಂದಮುಂ ಪೆಱ
ತೊಂದಱಿಕೆಯ ವೃತ್ತಜಾತಿಯುಂ ಪದಮವು ತ ।
ಳ್ತೊಂದಿರೆ ಪನ್ನೆರಡುವರಂ
[4]ಸಂದುದು ಮೆಲ್ವಾಡೆ[4]ನಿಕ್ಕುಮದು ಕನ್ನಡದೊಳ್ ॥ ೯೫೨

## ಸೂತ್ರಂ ೨೪೨

ಪದಿನಯ್ದುಮಿರ್ಪತಯ್ದುಂ
ಪದಂ ಯಥಾಸಂಭವಂ ಪ್ರಬಂಧದ ಮೆಯ್ಯೊಳ್ ॥
ಪುದಿದೊದವಿ [5]ನೆಗಟ್ಪೊ[5]ಡಂತದು
ಸದಲಂಕಾರಂ ರಸಾಸ್ಪದಂ ಪಾಡಕ್ಕುಂ ॥ ೯೫೩

---

1 ದಂತದು (ಅ). 2 ಯೊಳ್ (ಅ). 3 ವೃತ್ತಬಂಧದೆ. 4 ಸಂದುದವೊಳ್ಪಾ, ಸಂದುದುಮೇಲ್ಪೋ (ಅ). 5 ನಿಲ್ಪೊಡಂ (ಅ).

## ಸೂತ್ರಂ ೨೪೩

ಪಾಡುಗಳಿಂದಂ ತಱಿಸಲೆ
ಮಾಡಿದುದಂ ಪಾಡುಗಬ್ಬಮೆಂದು ಬುಧರ್ ಕೊಂ ।
ಡಾಡುವ[1]ರದಱಿಂ[1] ದಲ್ [2]ಮೆ
ಲ್ವಾಡುಂ[2] ರೂಢಿಯ ಬೆದಂಡೆಗಬ್ಬಮುಮಕ್ಕುಂ ॥ ೯೫೪

## ಸೂತ್ರಂ ೨೪೪

ಪಲತೆಱದ [3]ಪದ್ಯ[3]ದಿಂದಂ
ಲಲಿತವಚೋರಚನನಿಚಯಪದ್ಧತಿಕೆಗಳಿಂ ।
ಸಲೆ ನಿಲೆ ಸಮೆದುದು ಸರಸಾ
ಖಿಲವರ್ಣನಮಾದೊಡದುವೆ ಬಾಜನೆಗಬ್ಬಂ ॥ ೯೫೫

## ಸೂತ್ರಂ ೨೪೫

ನಗರಾರ್ಣವ[4]ಸರಿದಟವೀ[4]
ನಗಚಂದ್ರಾರ್ಕೋದಯರ್ತುಸಲಿಲಕ್ರೀಡಾ ।
ದಿ[5]ಗಳಾದಿಯಾಗೆ ಸರಸೋ[5]
ಕ್ತಿಗಳಿಂ ವರ್ಣಿಸುಗೆ ವರ್ಣಕಂಗಳ[6]ನದಱೊಳ್[6] ॥ ೯೫೬

## ಸೂತ್ರಂ ೨೪೬

ಸವಸಂದ ಮುಖಂ ಪ್ರತಿಮುಖ
ಮವಮರ್ಶಂ ಗರ್ಭಮಂತೆ ನಿರ್ವಹಣಮೆನಿ ।
ಪ್ಪ[7]ವವೆಯ್ದೆ[7] ಸಂಧಿಯಕ್ಕುಂ
ಸುವಿಹಿತಕವಿಮುಹಿತವಿತತಕೃತಿಪದ್ಧತಿಯೊಳ್ ॥ ೯೫೭

## ಸೂತ್ರಂ ೨೪೭

ಉಪಯೋಗದೆ ಬೀಜಂ ಬಿಂ
ದು ಪತಾಕೆ ಪ್ರಕರಿ ಕಾರ್ಯಮೆನೆ ಪಂಚ ವಿಧಂ ।

---

1 ರಿನ್ನದು (ಅ). 2 ಮೇಲ್ವಾಡುಂ, ವೊಳ್ವಾಡುಂ. 3 ಗದ್ಯ. 4 ಸಂಭೋಗಂ (ಅ). 5 ಳಿಗೆಮಧುರಸರಸೋ (ಅ). 6 ನಿದಱೊಳ್, ನವಱೊಳ್. 7 ವುಮಯ್ದು.

